


# ಸಾಂಸರ್ಗಿಕ ರೋಗಗಳು ಮತ್ತು ಅವುಗಳನ್ನು ತಡೆಗಟ್ಟುವ ಕ್ರಮಗಳು

ಡಾ. ಪಿ. ಎಸ್. ಬಣಕಾರ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
ಸಪ್ಟಂಬರ, ೧೯೮೦

ಉಪನ್ಯಾಸ ಗ್ರಂಥಮಾಲೆ

೩೧೧

# ಸಾಂಸರ್ಗಿಕ ರೋಗಗಳು ಮತ್ತು ಅವುಗಳನ್ನು ತಡೆಗಟ್ಟುವ ಕ್ರಮಗಳು

ಡಾ. ಪಿ. ಎಸ್. ಬಣಕಾರ

ಆರೋಗ್ಯಾಧಿಕಾರಿ, ಪ್ರಾಥಮಿಕ ಆರೋಗ್ಯಕೇಂದ್ರ ಮಂಚಿಕೇರಿ ( ಉ. ಕ. )

ಸಪ್ಟಂಬರ, ೧೯೬೦

ಪ್ರಕಾಶಕರು :

**ಸಿ. ಎಸ್. ಕಣವಿ**

ನಿರ್ದೇಶಕರು, ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೫೮೦ ೦೦೩

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ಸಪ್ಟೆಂಬರ, ೧೯೮೦



ಬೆಲೆ : ೫೦ ಪೈಸೆ

ಮುದ್ರಕರು :

**ಜಿ. ಬಿ. ಮನ್ನಾಚಾರ**

ಸಹಾಯಕ ನಿರ್ದೇಶಕರು,

ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ

ಧಾರವಾಡ-೫೮೦ ೦೦೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೧೦ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತ ಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

**ಎಸ್. ಎಸ್. ಒಡೆಯರ**
ಕುಲಪತಿಗಳು

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯ, ಪ್ರಸಾರಾಂಗದ ವತಿಯಿಂದ ಗ್ರಾಮೀಣಭಾಗಗಳಲ್ಲಿ ಉಪನ್ಯಾಸ ಮಾಲಿಕೆಗಳನ್ನು ಏರ್ಪಡಿಸಿ, ಜ್ಞಾನದೀವಿಗೆಯನ್ನು ಜನತೆಯ ಮನೆ ಮನೆಗೆ ಕೊಂಡೊಯ್ಯು ತ್ತಿರುವದು ಸ್ತುತ್ಯಕಾರ್ಯ.

'ಸಾಂಸರ್ಗಿಕ ರೋಗಗಳು ಮತ್ತು ಅವುಗಳನ್ನು ತಡೆಗಟ್ಟುವ ಕ್ರಮಗಳು' ಇಂದು ಗ್ರಾಮೀಣ ಜನತೆ ಅವಶ್ಯವಾಗಿ ತಿಳಿದು ಕೊಂಡಿರಲೇಬೇಕಾದ ವಿಷಯವೆಂದು ತೋರಿದ್ದರಿಂದ ಉಪನ್ಯಾಸ ಕ್ಕಾಗಿ ಈ ವಿಷಯವನ್ನು ಆಯ್ಕೆಮಾಡಿಕೊಂಡೆ. ಈ ಉಪನ್ಯಾಸ ವನ್ನು ತಯಾರಿಸುವಾಗ 'A treatise on Hygiene and Public Health' by Dr. B. N. Ghosh ಎಂಬ ಹೊತ್ತಿಗೆ ಯಿಂದ ವಿಷಯಗಳ ಸಂಗ್ರಹಣೆ ಮಾಡಲಾಗಿದೆ.

೨೫೬ನೆಯ ಉಪನ್ಯಾಸ ಮಾಲಿಕೆಯಲ್ಲಿ ನನಗೆ ಮೇಲ್ಕಾಣಿಸಿದ ವಿಷಯದ ಬಗೆಗೆ ಮಾತನಾಡಲು ಅವಕಾಶ ಮಾಡಿಕೊಟ್ಟು ಅದನ್ನು ಕಿರುಹೊತ್ತಿಗೆಯ ರೂಪದಲ್ಲಿ ಪ್ರಕಟಿಸಿರುವ ಕರ್ನಾಟಕ ವಿಶ್ವವಿದ್ಯಾಲಯ, ಪ್ರಸಾರಾಂಗದ ನಿರ್ದೇಶಕರಿಗೆ ನನ್ನ ಕೃತಜ್ಞತೆ ಗಳು. ನನ್ನ ಈ ಕಾರ್ಯದಲ್ಲಿ ಸಹಾಯ ಸಹಕಾರ ನೀಡಿದವರೆಲ್ಲ ಅಭಿನಂದನಾರ್ಹರು.

ಈ ವಿಷಯ ಗ್ರಾಮೀಣ ಜನತೆಯ ಮನ, ಮನೆಗಳನ್ನು ಮುಟ್ಟಿ ಅವರಲ್ಲಿ ಆರೋಗ್ಯದ ಪ್ರಜ್ಞೆಯನ್ನು ಜಾಗ್ರತಗೊಳಿಸಿದರೆ ನನ್ನ ಶ್ರಮ ಸಾರ್ಥಕ.

೧೩ ಮೇ, ೧೯೭೮

**ಡಾ. ಪಿ. ಎಸ್. ಬಣಕಾರ**
ಕೆ. ಎಂ. ಸಿ. ಆಸ್ಪತ್ರೆ, ಹುಬ್ಬಳ್ಳಿ

# ಪರಿವಿಡಿ

# ೧. ಸಾಂಸರ್ಗಿಕ ರೋಗಗಳು

ಭಾರತದಂತಹ ಹಳ್ಳಿಗಳೇ ಪ್ರಧಾನವಾಗಿರುವ ಹಾಗೂ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರದಲ್ಲಿ ಸಾಂಕ್ರಾಮಿಕ ರೋಗಗಳು, ನಿರುದ್ಯೋಗ, ಬಡತನ, ಮತ್ತು ಅಜ್ಞಾನಗಳಷ್ಟೇ ಭೀಕರ ಸಮಸ್ಯೆಗಳಾಗಿವೆ. ಸಮಸ್ಯೆಗೊಂದು ಪರಿಹಾರವುಂಟು ಎಂಬಂತೆ ಪ್ರಾಮಾಣಿಕ ಪ್ರಯತ್ನ ನಡೆದರೆ ಈ ರೋಗಗಳನ್ನು ಹೊಡೆದೋಡಿಸುವದು ಅಷ್ಟೇನೂ ಕಷ್ಟಕರ ವಿಷಯವಲ್ಲ.

ಕೆಲವೇ ವರುಷಗಳ ಹಿಂದೆ, ಊರಿಗೆ ಊರನ್ನೇ ಕೊಳ್ಳೆ ಹೊಡೆದು ನಾಶಮಾಡುತ್ತಿದ್ದ ಸಾಂಕ್ರಮಿಕ ರೋಗಗಳಾದ ಕಾಲರಾ ಪ್ಲೇಗ್‌ಗಳಂತಹ ಭೀಕರ ರೋಗಗಳನ್ನು ಈಗ ಪರಿಣಾಮಕಾರಿಯಾಗಿ ನಿಯಂತ್ರಿಸಲಾಗಿದೆ. ಕಳೆದ ವರುಷದಿಂದ ಮೈಲೀಬೇನೆಯನ್ನು ಸಂಪೂರ್ಣವಾಗಿ ಹೋಗಲಾಡಿಸಲಾಗಿದೆ. ಸಾಧಿಸಬೇಕಾದ ಗುರಿ ಇನ್ನೂ ಬಹಳ ದೂರವಿದೆ.

ಮುಂದುವರಿದ ರಾಷ್ಟ್ರಗಳಾದ ಇಂಗ್ಲಂಡ್, ಅಮೇರಿಕಾ, ಜರ್ಮನಿ, ಜಪಾನಗಳಲ್ಲಿ ಸಾಂಕ್ರಮಿಕ ರೋಗಗಳನ್ನು ಸಂಪೂರ್ಣವಾಗಿ ಮಣತೋತ್ಪಾಟನೆ ಮಾಡಲಾಗಿದೆಯೆಂದರೂ ಅಡ್ಡಿಯಿಲ್ಲ. ಈ ಸಾಧನೆ, ಜನರಲ್ಲಿ ಆರೋಗ್ಯದ ಬಗ್ಗೆ ತಿಳಿವಳಿಕೆ ನೀಡಿ, ಅವರ ಸಹಕಾರ ಪಡೆದುದರಿಂದ ಆಯಿತು. ಜನಸಾಮಾನ್ಯರ

ಜೀವನಮಟ್ಟವನ್ನು ಎತ್ತರಿಸಿ ಸ್ಥಿತಿಗತಿಗಳನ್ನು ಉತ್ತಮ ಪಡಿಸಿ, ಅವರಲ್ಲಿ ರೋಗನಿರೋಧಕ ಶಕ್ತಿಯನ್ನು ಹೆಚ್ಚಿಸಿದ್ದರಿಂದ ಸಾಧ್ಯ ವಾಯಿತು. ಅಂತಹ ಪ್ರಯತ್ನಗಳು ನಮ್ಮಲ್ಲೀದು ಅಲ್ಲಿಗಿಂತಲೂ ಬೃಹತ್ಪ್ರಮಾಣದಲ್ಲಿ ನಡೆಯಬೇಕಾಗಿದೆ.

ನಿರುದ್ಯೋಗ, ಬಡತನ, ಅಜ್ಞಾನ ಹಾಗೂ ಸಾಂಕ್ರಮಿಕ ರೋಗಗಳ ಸಂಬಂಧ ಅನ್ಯೋನ್ಯ. ಸಾಂಕ್ರಮಿಕ ರೋಗಗಳ ನಿವಾ ರಣೆಯಾಗಿ ಬೇಕಾದರೆ ಬಡತನ ಅಜ್ಞಾನಗಳು ತೊಲಗಬೇಕು. ಉದಾಹರಣೆಗಾಗಿ, ಒಂದು ಮಗುವು ವಾಂತಿಭೇದಿಯಿಂದ ಸಾಯು ತ್ತಿದೆಯೆಂದು ಭಾವಿಸೋಣ. ವಾಂತಿಭೇದಿಗೆ ನೀರಿನಲ್ಲಿ ಅಥವಾ ಹಾಲಿನಲ್ಲಿರುವ ರೋಗಜಂತುಗಳೇ ಮುಖ್ಯಕಾರಣವಾದರೂ ಶುದ್ಧ ನೀರಿನಪೂರೈಕೆಯ ಅಭಾವ.ಮಗುವಿನಲ್ಲಿ ರೋಗನಿರೋಧಕಶಕ್ತಿಯ ಕೊರತೆ, ತಾಯಿಗೆ ಹಾಲನ್ನು ಹೇಗೆ ಶುದ್ಧವಾಗಿಡಬೇಕು ಮತ್ತು ಮಗುವಿನ ಉಪಚಾರ ಹೇಗೆ ಮಾಡಿಸಬೇಕು ಎಂಬುದು ತಿಳಿಯದೇ ಇರುವದು, ಇವೆಲ್ಲ ಪೂರಕ ಕಾರಣಗಳಾಗಿವೆ. ಆದಕಾರಣ ಸಾಂಕ್ರಮಿಕ ರೋಗಗಳ ಮೇಲೆ ನಮ್ಮ ಯುದ್ಧ ಬಹುಮುಖಿ ವಾಗಬೇಕು. ಆಗಲೇ ಪ್ರಗತಿ ಸಾಧ್ಯ ಗುರಿ ಸಾಧನೆ ಸುಲಭ.

## ಸಾಂಸರ್ಗಿಕ ರೋಗವೆಂದರೇನು ?

ಮನುಷ್ಯರಿಂದ ಮನುಷ್ಯರಿಗೆ ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ, ಅಂದರೆ ಬೇರೆ ಪ್ರಾಣಿಗಳ ಮುಖಾಂತರ ಹರ ಡುವ ರೋಗಗಳಿಗೆ ಸಾಂಸರ್ಗಿಕ ರೋಗಗಳೆನ್ನುತ್ತಾರ. ಉದಾ: ಒಬ್ಬಕ್ಷಯರೋಗಿ ಕೆಮ್ಮುವಾಗ, ಆತನ ಕಫದಲ್ಲಿ ಅನೇಕ ರೋಗ ಜಂತುಗಳು ಹೊರಬರುತ್ತವೆ. ಅವನ ಆರೈಕೆ ಮಾಡುವ ವ್ಯಕ್ತಿ

ಸಾಕಷ್ಟು ಮುಂಜಾಗರೂಕತಾ ಕ್ರಮಗಳನ್ನು ತೆಗೆದುಕೊಳ್ಳದಿದ್ದರೆ, ಆ ರೋಗ ಜಂತುಗಳು ಆರೈಕೆ ಮಾಡುವವನು ಉಸಿರಾಡಿಸುವಾಗ ಅವನ ಪುಪ್ಪುಸದಲ್ಲಿ ಸೇರಿ ಅವನಲ್ಲಿ ರೋಗವನ್ನುಂಟು ಮಾಡುತ್ತವೆ. ಇದು ಪ್ರತ್ಯಕ್ಷ ಹಬ್ಬುವಿಕೆಯ ಉದಾಹರಣೆ.

ಚಳಿಜ್ವರ ಒಬ್ಬವ್ಯಕ್ತಿಯಿಂದ ಇನ್ನೊಬ್ಬ ವ್ಯಕ್ತಿಗೆ ಗುಂಗಾಡುಗಳಿಂದ ಹರಡುತ್ತದೆ. ಚಳಿಜ್ವರದಿಂದ ಬಳಲುವ ರೋಗಿಯನ್ನು ಕಚ್ಚಿದ ಗುಂಗಾಡು ಅವನ ರಕ್ತದೊಡನೆ ರೋಗಜಂತುಗಳನ್ನೂ ಹೀರುತ್ತದೆ. ಹೀಗೆಹೀರಲ್ಪಟ್ಟ ರೋಗಜಂತುಗಳು, ಗುಂಗಾಡಿನ ಶರೀರದಲ್ಲಿ ಬೆಳೆದು ವೃದ್ಧಿಗೊಂಡು, ಈ ಗುಂಗಾಡು, ಮಗದೊಬ್ಬ ವ್ಯಕ್ತಿಯನ್ನು ಕಚ್ಚಿದಾಗ ಕಚ್ಚಿಸಿಕೊಂಡ ರೋಗಿಗೆ ಚಳಿಜ್ವರ ಬರುತ್ತದೆ. ಇದು ಪರೋಕ್ಷ ರೋಗ ಹರಡುವಿಕೆಯ ಉದಾಹರಣೆ.

## ಸಾಂಸರ್ಗಿಕ ರೋಗಗಳು ಹೇಗೆ ಹರಡುತ್ತವೆ?

ವಾತಾವರಣದ ಮಡಿಲಲ್ಲಿರುವ ನಾವು ನಿಜವಾಗಿಯೂ ಸೂಕ್ಷ್ಮ ಜೀವಾಣುಗಳ ಸಾಗರದಲ್ಲಿ ಈಜುತ್ತಿರುತ್ತೇವೆ. ಇದೊಂದು ಸಹಜೀವನ. ಈ ಸಮತೋಲನದಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಸಾಕು, ರೋಗಜಂತುಗಳು ಮನುಷ್ಯನ ಮೇಲೆ ಆಕ್ರಮಣ ಮಾಡುತ್ತವೆ. ಈ ಯುದ್ಧದಲ್ಲಿ ಮನುಷ್ಯ ಜಯಶಾಲಿಯಾದರೆ ರೋಗದ ಲಕ್ಷಣಗಳು ಅವನಲ್ಲಿ ಕಾಣಿಸುವದಿಲ್ಲ. ಈ ಸಮರದಲ್ಲಿ ಆತ ಸೋತರೆ ಆತ ರೋಗಿಯಾಗುತ್ತಾನೆ. ಅಷ್ಟೇ ಅಲ್ಲ, ಅದಕ್ಕೆ

ಬಲಿಯಾಗುವ ಮುನ್ನ ಆ ರೋಗ ಪ್ರಸಾರದ ಕೇಂದ್ರವೂ ಆಗಬಹುದು.

ಈ ಸಾಂಸರ್ಗಿಕ ರೋಗಗಳು ಮುಖ್ಯವಾಗಿ ಐದು ರೀತಿ ಹರಡುತ್ತವೆ.

೧. **ಹವೆಯ ಮೂಲಕ:** ರೋಗಿಯು ಹೊರಬಿಟ್ಟ ಉಸಿರಿನಲ್ಲಿ ಅನೇಕ ರೋಗಾಣುಗಳಿರುತ್ತವೆ. ಈ ರೋಗಾಣುಗಳು ಒಳಗೆ ತೆಗೆದುಕೊಳ್ಳುವ ಹವೆಯೊಡನೆ, ಬೇರೊಬ್ಬ ವ್ಯಕ್ತಿಯ ಶರೀರವನ್ನು ಸೇರಿ ಆತನಲ್ಲಿ ರೋಗವನ್ನುಂಟು ಮಾಡುತ್ತವೆ. ಈ ಬಗೆಯಾಗಿ ಹರಡುವ ರೋಗಗಳೆಂದರೆ ಪುಪ್ಪಸಕ್ಷಯ, ಗಂಟಲು ಬೇನೆ (Diphtheria), ಮಂಗಬಾವು, ಗೊಬ್ಬರ, ಮೆದುಳಿನಜ್ವರ, (Meningitis) ಫ್ಲು, ಪ್ಲೈಲಿ, ಗಣಜಲಿ ಮತ್ತು ನಾಯಿಕೆಮ್ಮು ಇಲ್ಲವೆ ಕೊಡಿಗೆಮ್ಮು.

೨. **ನೀರು ಮತ್ತು ಆಹಾರಗಳ ಮೂಲಕ:** ಇಲ್ಲಿ ಒಬ್ಬ ರೋಗಿಯ ಎಂಜಿಲು, ಮಲ, ಮೂತ್ರಗಳಿಂದ ಬೇರೊಬ್ಬರು ಸೇವಿಸುವ ನೀರು ಇಲ್ಲವೆ, ಆಹಾರ ಕಲುಷಿತವಾಗಿ ರೋಗಾಣುಗಳು ವೃದ್ಧಿಗೊಂಡು ಸೇವಿಸಿದ ವ್ಯಕ್ತಿಯಲ್ಲಿ ರೋಗ ಗೋಚರವಾಗುತ್ತದೆ. ಈ ರೀತಿಯಿಂದ ಬರುವ ರೋಗಗಳೆಂದರೆ ವಿಷಮ ಜ್ವರ, ವಾಂತಿಭೇದಿ, ರಕ್ತಭೇದಿ ಆಮಶಂಕೆ, ಕಾಲರಾ, ಪೋಲಿಯೋ ಕಾಮಾಲೆ ರೋಗ, ಜಂತು ಹುಳುಬಾಧೆ ಇತ್ಯಾದಿ.

೩. **ಬೇರೆ ಕ್ರಿಮಿ ಕೀಟಗಳ ಮೂಲಕ:** ರೋಗಿಯ ರಕ್ತವನ್ನು ಸೇವಿಸಿದ ಹುಳು ಬೇರೊಬ್ಬನನ್ನು ಕಚ್ಚಿ ಅವನಲ್ಲಿ ರೋಗ

ವನ್ನು ಹರಡುತ್ತವೆ. ಈ ಬಗೆಯಿಂದ ಹರಡುವ ರೋಗಗಳೆಂದರೆ ಚಳಿಜ್ವರ, ಆನೆಕಾಲು ರೋಗ, ಲೀಶ್‌ಮೇನಿಯಾಸಿಸ್, ಮರುಕಳಿಸುವ ಜ್ವರ, ಪ್ಲೇಗ್, ಹಳದಿಜ್ವರ, ಡೆಂಗೂಜ್ವರ, ಕ್ಯಾಸನೂರ ಅರಣ್ಯಜ್ವರ ಮುಂತಾದವುಗಳು.

೪. **ಬೇರೆ ಪ್ರಾಣಿಗಳಿಂದ** : ಇಲ್ಲಿ ಮುಖ್ಯವಾಗಿ ರೋಗ ಪ್ರಾಣಿಗಳಲ್ಲಿರುತ್ತದೆ. ಅದು ಪ್ರಾಣಿಗಳಿಂದ ಪ್ರಾಣಿಗಳಿಗೆ ಹರಡುತ್ತದೆ. ಈ ಪ್ರಾಣಿಗಳ ಕಚ್ಚುವಿಕೆಯಿಂದಾಗಲೀ, ಇಲ್ಲವೇ ರೋಗ ಜಂತುಗಳು ಚರ್ಮದಲ್ಲಿಯ ಗಾಯಗಳ ಮೂಲಕ ಮನುಷ್ಯನ ಶರೀರವನ್ನು ಸೇರಿಯಾಗಲೀ ಅವನು ಈ ರೋಗಗಳಿಗೆ ಬಲಿಯಾಗುತ್ತಾನೆ. ಈ ರೀತಿಯಿಂದ ಹರಡುವ ರೋಗಗಳೆಂದರೆ ಹುಚ್ಚುನಾಯಿರೋಗ, ಧನುರ್ವಾತ ಆ್ಯಂಥ್ರಾಕ್ಸರೋಗ ಇತ್ಯಾದಿ.

೫. **ತ್ವಚೆಯ ಸಂಪರ್ಕದಿಂದ** : ಇಲ್ಲಿ ಚರ್ಮದಿಂದ ಚರ್ಮಕ್ಕೆ ರೋಗಜಂತುಗಳು ಹರಡುತ್ತವೆ. ರೋಗಿಯ ಚರ್ಮದಲ್ಲಿರುವ ರೋಗಜಂತುಗಳು ಅವನ ಸಂಸರ್ಗದಿಂದ ಬೇರೊಬ್ಬ ವ್ಯಕ್ತಿಯ ಚರ್ಮದ ಮುಖಾಂತರ ಸೇರಿ ಆ ವ್ಯಕ್ತಿಗೆ ರೋಗ ವನ್ನುಂಟು ಮಾಡುತ್ತವೆ.

ಉದಾ : ಕುಷ್ಟರೋಗ ಮತ್ತು ಗುಹ್ಯರೋಗಗಳಾದ ಗೊನೋರಿಯಾ, ಸಿಫಿಲಿಸ್, ಶಾಂಕ್ರ್ಯಾಡ್, ಗ್ರಾನುಲೋಮಾ ಇಂಗ್ವಿನೋಲ್ ಇತ್ಯಾದಿ.

ನಮ್ಮ ರಾಷ್ಟ್ರದಲ್ಲಿ ಮುಖ್ಯವಾಗಿರುವ ಕೆಲವು ರೋಗಗಳು ಮತ್ತು ಅವುಗಳನ್ನು ತಡೆಗಟ್ಟುವ ಕ್ರಮಗಳನ್ನು ಈ ಕೆಳಗೆ ವಿವರಿಸಲಾಗಿದೆ.

## ೨. ಹವೆಯು ಮೂಲಕ ಹರಡುವ ರೋಗಗಳು

**ಪುಪ್ಪುಸಕ್ಷಯ :** ರೋಗಜಂತು ಮೈಕೋ ಬ್ಯಾಕ್ಟೀರಿಯಂ ಟ್ಯುಬರ್ ಕ್ಯುಲೊಸಿಸ್ ಎಂಬ ಸೂಕ್ಷ್ಮಾಣು. ಈ ರೋಗ ಮುಖ್ಯವಾಗಿ ಹವೆಯು ಮೂಲಕ ಪಸರಿಸುತ್ತದೆ. ರೋಗಿಯ ಕೆಮ್ಮು, ಶೀನು ಹಾಗೂ ಗಟ್ಟಿಯಾಗಿ ಮಾತನಾಡುವದು. ಇವುಗಳಿಂದ ರೋಗಜಂತುಗಳು, ಧೂಳಿಯಲ್ಲಿ, ನೆಲದ ಮೇಲೆ ಗೋಡೆಗಳ ಮೇಲೆ, ಬಟ್ಟೆಗಳ ಮೇಲೆ, ಪುಸ್ತಕಗಳ ಮೇಲೆ ಹರಡುತ್ತವೆ. ರೋಗಿಯನ್ನು ಶುಸ್ರೂಶೆಮಾಡುವ ವ್ಯಕ್ತಿಯು ಶ್ವಾಸದೊಡನೆ ಅವನ ಪುಪ್ಪುಸವನ್ನು ಸೇರಿ ಅವನಿಗೆ ರೋಗವನ್ನುಂಟು ಮಾಡುತ್ತವೆ. ಇದಲ್ಲದೆ ಈ ರೋಗ ಜಂತುಗಳು, ಆಹಾರ, ನೀರು ಹಾಗೂ ಚರ್ಮದಲ್ಲಿರುವ ಗಾಯಗಳ ಮೂಲಕವೂ ಬೇರೊಬ್ಬ ವ್ಯಕ್ತಿಯ ಶರೀರವನ್ನು ಸೇರಬಹುದು.

**ರೋಗದ ಮುಖ್ಯ ಲಕ್ಷಣಗಳು :** ಜ್ವರ, ಕೆಮ್ಮು, ನಿಃಶಕ್ತಿ ಹಸಿವಿಲ್ಲದಿರುವದು ಕಫದಲ್ಲಿ ರಕ್ತ. ದಮ್ಮು ಇತ್ಯಾದಿ.

**ಸರ್ವೆಯಿಂದ ಕಂಡುಬರುವ** ಕೆಲವು ಮುಖ್ಯ ಅಂಶಗಳು.

(i) ಸಾವಿರದಲ್ಲಿ ೧೩ರಿಂದ ೨೫ ಜನ ಕ್ಷಯರೋಗದಿಂದ ಬಳಲುತ್ತಾರೆ.

(ii) ಸಾವಿರದಲ್ಲಿ ೨ ರಿಂದ ೮ ಜನ ಇನ್ನೊಬ್ಬರಿಗೆ ರೋಗ ಪಸರಿಸುವಷ್ಟು ಭೀಕರವಾದ ರೋಗಿಗಳಾಗಿರುತ್ತಾರೆ.

(iii) ಹಳ್ಳಿಗಳಲ್ಲಿ. ಶಹರಗಳಲ್ಲಿ ಈ ರೋಗ ಸಮವಾಗಿ ಹರಡುತ್ತದೆ.

(iv) ೩೫ ವರ್ಷಗಳ ನಂತರ ಗಂಡಸರಲ್ಲಿ ಈ ರೋಗ ಹೆಚ್ಚಾಗಿ ಕಂಡು ಬರುತ್ತದೆ. ಮತ್ತು ವಯಸ್ಸು ಹೆಚ್ಚಿದಂತೆ ರೋಗಿಗಳ ಸಂಖ್ಯೆ ಹೆಚ್ಚುತ್ತದೆ.

(v) ಶಹರಗಳಲ್ಲಿ ಜನನಿಬಿಡುವಾದ ಕಚ್ಚಾ ಮನೆಗಳಲ್ಲಿ, ಅಂದರೆ ಗಾಳಿ ಬೆಳಕು ಸರಿಯಾಗಿಲ್ಲದ ಮನೆಗಳಲ್ಲಿ ಈ ರೋಗ ಹೆಚ್ಚಿನ ಪ್ರಮಾಣದಲ್ಲಿ ಕಾಣುತ್ತದೆ.

(vi) ೧೦ ರಿಂದ ೧೨ ದಶಲಕ್ಷ ಜನರು ನಮ್ಮ ದೇಶದಲ್ಲಿ ಈ ರೋಗದಿಂದ ಬಳಲುತ್ತಾರೆಂದು ಅಂದಾಜು ಮಾಡಲಾಗಿದೆ.

(vii) ಲಕ್ಷದಲ್ಲಿ ೫೦ರಷ್ಟು ಜನ ಪ್ರತಿವರ್ಷ ಈ ರೋಗಕ್ಕೆ ಬಲಿಯಾಗುತ್ತಾರೆ.

**ರೋಗ ಹರಡಲು ಕಾರಣಗಳು :** ಜೀವನಮಟ್ಟ, ಮನೆಯ ವಿನ್ಯಾಸ, ಜನನಿಬಿಡತೆ, ಆರ್ಥಿಕ ಪರಿಸ್ಥಿತಿ, ಜನರ ಆರೋಗ್ಯ ಸ್ಥಿತಿ, ಸಾಮಾಜಿಕ ಪದ್ಧತಿಗಳು, ಆರೋಗ್ಯದ ಬಗೆಗಿನ ಅಜ್ಞಾನ, ಜನರ ರೋಗ ನಿರೋಧಕ ಶಕ್ತಿ, ರೋಗಜಂತುಗಳು ಔಷಧಿಗಳಿಗೆ ಮಣಿಯದೇ ಬೆಳೆಯುವದು, ಅನಿಯಮಿತ ಔಷಧ ಸೇವನೆ ಇವೆಲ್ಲವುಗಳ ಮೇಲೆ ರೋಗಗಳ ಪ್ರಸಾರ ಅವಲಂಬಿಸಿರುತ್ತದೆ.

**ಪ್ರತಿಬಂಧಕ ಉಪಾಯಗಳು :** (೧) ರೋಗಿಗಳನ್ನು ಶೋಧಿಸಿ ಅವರನ್ನು ಮನೆಯ ಬೇರ್ಪಡಿಸಿ (ರೋಗಿಯ ಕಫದಲ್ಲಿ

ರೋಗಜಂತುಗಳು ಇರುವದರೆಗೆ) ಆಸ್ಪತ್ರೆಯಲ್ಲಾಗಲೀ, ಮನೆಯಲ್ಲಿ ಪ್ರತ್ಯೇಕ ಕೋಣೆಯಲ್ಲಾಗಲೀ ರೋಗ ಪೂರ್ಣ ಗುಣಮುಖವಾಗುವವರೆಗೆ ಅಂದರೆ ಕನಿಷ್ಟ ೨ ವರುಷ ಉಪಚರಿಸಬೇಕು.

(೨) ಮಕ್ಕಳಿಗೆ ಜನಿಸಿದ ೩ ತಿಂಗಳೊಳಗಾಗಿ ರೋಗ ಪ್ರತಿಬಂಧಕ ಬಿ. ಸಿ. ಜಿ. ಚುಚ್ಚುಮದ್ದು ಹಾಕಿಸಬೇಕು.

(೩) ರೋಗಿಯ ಕಫವನ್ನು ಪ್ರತ್ಯೇಕ ಪಾತ್ರೆಯಲ್ಲಿ ಶೇಖರಿಸಿ, ಕ್ರಿಮಿನಾಶಕಗಳಿಂದ ಉಪಚರಿಸಿ ನಾಶಪಡಿಸಬೇಕು.

## ಗಂಟಲಿನ ಬಿಳಿಪರದೆ ಬೇನೆ(Diphtheria)

ಇದು ಮುಖ್ಯವಾಗಿ ಮಕ್ಕಳಲ್ಲಿ ಕಾಣಿಸಿಕೊಳ್ಳುವ ರೋಗ ಕಾನಿನೇ ಬೆಕ್ಟೇರಿಯಂ ಡಿಫ್ತೀರಿಯ ಎಂಬ ರೋಗಜಂತುಗಳು ರೋಗಕ್ಕೆ ಕಾರಣ.

**ರೋಗದ ಲಕ್ಷಣಗಳು:** ಜ್ವರ, ಕೆಮ್ಮು, ಗಂಟಲು ನೋವು, ಗಂಟಲಲ್ಲಿ ಬಿಳಿಯ ಪರದೆ ಕಾಣಿಸಿಕೊಳ್ಳುವದು. ಈ ರೋಗಜಂತುಗಳಿಂದ ಹುಟ್ಟುವ ವಿಷಕಾರಿ ವಸ್ತುವಿನಿಂದ (Exotoxin) ಹೃದಯ, ಮೆದುಳುಗಳ ಮೇಲೆ ಪರಿಣಾಮವಾಗುತ್ತದೆ. ಶ್ವಾಸೋಚ್ಛ್ವಾಸದ ಸ್ನಾಯುಗಳು, ಹೃದಯದ ಸ್ನಾಯುಗಳು, ಕಣ್ಣಿನ ಸ್ನಾಯುಗಳು ಬಲಹೀನಗೊಳ್ಳುತ್ತವೆ; ಇಲ್ಲವೇ ತಮ್ಮ ಕ್ರಿಯೆಗಳನ್ನು ಪೂರ್ಣವಾಗಿ ನಿಲ್ಲಿಸಬಹುದು.

**ಹರಡುವ ವಿಧಾನ:** ರೋಗಿಯು ಕೆಮ್ಮುವದರಿಂದ, ಶೀನುವದರಿಂದ, ಮಾತನಾಡುವದರಿಂದ ಈ ರೋಗಜಂತಗಳು

ಹವೆಯಲ್ಲಿ ಸೇರುತ್ತವೆ. ಬೇರೊಬ್ಬರಿಗೆ, ಅವರ ಶ್ವಾಸದ ಮೂಲಕ ಇವು ದೇಹವನ್ನು ಸೇರಲು, ಅವರಲ್ಲಿ ರೋಗ ಕಾಣಿಸಿಕೊಳ್ಳುತ್ತವೆ. ರೋಗ ಕಾಣಿಸಿಕೊಂಡ ೨ ವಾರಗಳವರೆಗೆ ಅವರ ಉಚ್ಛ್ವಾಸದಲ್ಲಿ ಈ ರೋಗಜಂತುಗಳಿರುತ್ತವೆ.

**ಪ್ರತಿಬಂಧಕ ಉಪಾಯಗಳು :** (೧) ರೋಗಿಯನ್ನು ಉಳಿದ ಮಕ್ಕಳಿಂದ ಪ್ರತ್ಯೇಕಿಸಿ ಉಪಚರಿಸುವದು (೨) ರೋಗ ಪ್ರತಿಬಂಧಕ ಚುಚ್ಚುಮದ್ದು ಹಾಕಿಸುವದೂ. ಮಗುವಿಗೆ ೩, ೪, ೫ ನೆಯ ತಿಂಗಳುಗಳಲ್ಲಿ, ಈ ಚುಚ್ಚುಮದ್ದನ್ನು ಹಾಕಿಸಬೇಕು.

**ಗೊಬ್ಬರ** (Measles) ; ವೈರಸ್ ಎಂಬ ಅತಿ, ಸೂಕ್ಷ್ಮ ಜೀವಾಣುಗಳಿಂದ ಬರುವ ಈ ರೋಗ ಹೆಚ್ಚಾಗಿ ಮಕ್ಕಳಲ್ಲಿ ಕಾಣಿಸಿಕೊಳ್ಳುತ್ತದೆ.

**ರೋಗದ ಲಕ್ಷಣಗಳು :** ಜ್ವರ, ತಲೆನೋವು, ಮೂಗು ಸೋರುವದು, ೩, ೪ ದಿನಗಳ ನಂತರ ಮುಖದಿಂದ ಆರಂಭವಾಗಿ ದೇಹದ ಮೇಲೆಲ್ಲ ಸಣ್ಣ, ಸಣ್ಣ ಬೊಕ್ಕೆಗಳು ಕಾಣಿಸಿಕೊಳ್ಳುವವು. ಬೊಕ್ಕೆಗಳು ಕಾಣಿಸಿಕೊಳ್ಳುವ ೪ ದಿನ ಮುಂಚೆ, ೫ ದಿನ ಅನಂತರ ರೋಗಿಯ ಉಸಿರಿನಲ್ಲಿ ರೋಗ ಜಂತುಗಳಿರುತ್ತವೆ.

**ರೋಗತಡೆಗಟ್ಟುವ ವಿಧಾನ :** ಜ್ವರ ಬಂದ ಮಗುವನ್ನು ಬೊಕ್ಕೆಗಳು ಕಾಣಿಸಿಕೊಳ್ಳುವದಕ್ಕಿಂತ ೪ ದಿನ ಮುಂಚೆ ಹಾಗೂ ಅನಂತರ ೨ ವಾರಗಳವರೆಗೆ ಬೇರೆ ಮಕ್ಕಳಿಂದ ಬೇರ್ಪಡಿಸಿ ಉಪಚರಿಸುವದು.

**ಇನ್‌ಫ್ಲುಯೆಂಝಾ :** ಎಲ್ಲ ವಯಸ್ಸಿನವರಲ್ಲಿ ಕಾಣಿಸಿಕೊಳ್ಳುವ ರೋಗ. ಇದುಕೂಡಾ ಒಂದು ಪ್ರಕಾರದ ವೈರಸ್ ಎಂಬ ಅತೀ ಸುಕ್ಷ್ಮಾಣು ಜೀವಿಯಿಂದ ಬರುವರೋಗ.

**ರೋಗದ ಲಕ್ಷಣಗಳು :** ಜ್ವರ, ಚಳಿ, ತಲೆನೋವು, ಮೈ ಕೈನೋವು ಒಂದು ವಾರದಲ್ಲಿ ಯಾವ ಉಪಚಾರವೂ ಇಲ್ಲದೇಯೇ ಕಡಿಮೆಯಾಗುವದಾದರೂ ಬೇರೆ ರೋಗಜಂತುಗಳು ಇದೇ ವೇಳೆಯಲ್ಲಿ ದೇಹವನ್ನು ಸೇರಿದರೆ ರೊಗ ಉಲ್ಬಣಗೊಳ್ಳಬಹುದು. ಇಲ್ಲವೇ ಹೆಚ್ಚು ಕಾಲ ಇರಬಹದು. ಇದು ಕೂಡಾ ರೋಗಿಯ ಉಚ್ಛ್ವಾಸದೊಡನೆ ಹರಡುವ ರೋಗ ಜಂತುಗಳಿಂದ ಪಸರಿಸುತ್ತದೆ. ರೋಗ ಕಾಣಿಸಿಕೊಂಡ ೩ ದಿನಗಳವರೆಗೆ ಆವನ ಉಚ್ಛ್ವಾಸದಲ್ಲಿ ರೋಗಜಂತುಗಳಿರುತ್ತವೆ. ಜನನಿಬಿಡತೆ ರೋಗದ ಸಾಂಕ್ರಮಿಕತೆಯನ್ನು ಹೆಚ್ಚಿಸುತ್ತದೆ.

**ಪ್ರತಿಬಂಧಕ ಉಪಾಯಗಳು :** (೧) ರೋಗ ಕಾಣಿಸಿಕೊಂಡ ೭ ದಿನಗಳವರೆಗೆ ಬೇರೆಯವರ ಜೊತೆಗೆ ಕೂಡದಿರುವದು. (೨) ಸಾರ್ವಜನಿಕ ಸ್ಥಳಗಳಲ್ಲಿ ಕೆಮ್ಮುವಾಗ, ಸೀನುವಾಗ ಮುಖದ ಹತ್ತಿರ ವಸ್ತ್ರ ಹಿಡಿದುಕೊಳ್ಳುವದು.

**ಸಿಡುಬು :** 'ವೇರಿಯೋಲಾ ವೈರಸ್' ಎಂಬ ಸೂಕ್ಷ್ಮ ಜೀವಾಣುವಿನಿಂದ ಹರಡುವ ಈ ರೋಗವನ್ನು ಯಶಸ್ವಿಯಾಗಿ ನಮ್ಮ ದೇಶದಿಂದ ಹೊಡೆದೋಡಿಸಲಾಗಿದೆ.

**ರೋಗದ ಲಕ್ಷಣಗಳು :** ಜ್ವರ, ಕೆಮ್ಮು, ಗಂಟಲುನೋವು ಕಾಣಿಸಿಕೊಂಡ ೩ನೆಯ ದಿನ ಬೊಕ್ಕೆಗಳು ಕಾಣಿಸಿಕೊಳ್ಳುತ್ತವೆ.

ಈ ಬೊಕ್ಕೆಗಳು ಕ್ರಮೇಣವಾಗಿ ಕಾಣಿಸಿಕೊಂಡು ಅನಂತರ ಒಣಗಿ ಉದರುತ್ತವೆ. ಬೊಕ್ಕೆಗಳು ಮುಖ್ಯವಾಗಿ ಮುಖ, ಕೈಕಾಲು, ಮುಂಗೈಗಳ ಮೇಲೆ ಕಾಣಿಸಿಕೊಳ್ಳುತ್ತವೆ.

**ರೋಗ ಹರಡುವ ವಿಧಾನ** : ಜ್ವರ ಬಂದಾಗಿನಿಂದ ಹಕ್ಕಳೆಗಳು ಪೂರ್ತಿಯಾಗಿ ಒಣಗಿ ಉದುರುವವರೆಗೆ ಈ ರೋಗ ಒಬ್ಬರಿಂದ ಒಬ್ಬರಿಗೆ ಶ್ವಾಸಕೋಶದ ಮೂಲಕ ಸೇರಬಲ್ಲದು. ಮೊದಲು ಮೂಗು ಗಂಟಲಿನಿಂದ ಬರುವ ದ್ರವದಿಂದ ಈ ರೋಗಜಂತುಗಳು ಹವೆಯಲ್ಲಿ ಸೇರುತ್ತವೆ. ಅನಂತರ ಬೊಕ್ಕೆಗಳು ಉದುರುವದರಿಂದ ಅವು ಹವೆಯಲ್ಲಿ ಸೇರಿ ಬೇರೆಯವರಿಗೆ ಅಪಾಯಕಾರಿಯಾಗುತ್ತವೆ.

**ಪ್ರತಿಬಂಧಕ ಉಪಾಯಗಳು** : (೧) ರೋಗಿಯನ್ನು ಬೇರ್ಪಡಿಸಿ ಉಪಚರಿಸುವದು. (೨) ರೋಗ ಪ್ರತಿಬಂಧಕ ಚುಚ್ಚುಮದ್ದು ಜನಿಸಿದ ೩ ತಿಂಗಳೊಳಗಾಗಿ ೫ನೇಯ ವರ್ಷಕ್ಕೆ ಮತ್ತು ಅನಂತರ ಪ್ರತಿವರ್ಷಕ್ಕೊಮ್ಮೆ ಹಾಕಿಸುವದು.

(i) ಮಗುವಿನ ಆರೋಗ್ಯ ಸರಿ ಇಲ್ಲದಿರುವಾಗ

(ii) ಮಗುವಿಗೆ ಜ್ವರ ಕೆಮ್ಮುಗಳಿರುವಾಗ

(iii) ಮಗುವಿನ ಮೈ ಮೇಲೆ ಬೊಕ್ಕೆಗಳಿರುವಾಗ

(vi) ಗರ್ಭಿಣಿಸ್ತ್ರೀಯರಿಗೆ ಈ ಚುಚ್ಚುಮದ್ದು ಹಾಕಿಸಬಾರದು.

**ನಾಯಿಕೆಮ್ಮು** : 'ಪರ್ಟುಸಿಸ್ ಬೆಸಿಲಸ್' ಎಂಬ ರೋಗಜಂತುಗಳಿಂದ ಬರುವ ರೋಗ ಮುಖ್ಯವಾಗಿ ಮಕ್ಕಳಲ್ಲಿ ಕಂಡುಬರುತ್ತದೆ.

**ರೋಗದಲಕ್ಷಣಗಳು** : ಜ್ವರ, ತಲೆನೋವು, ಗಂಟಲುಬೇನೆ ಹಾಗೂ ಬಹಳ ಸಮಯದವರೆಗೆ ಉಸಿರು ಹಿಡಿದು ಕೆಮ್ಮುವನು. ಕೆಮ್ಮುವಾಗ ಮಗುವಿನ ಮುಖ ನೀಲಿವರ್ಣಕ್ಕೆ ತಿರುಗಬಹುದು. ಸುಲಭವಾಗಿ 'ಬ್ರಾಂಕ್ಯಾಟಿಸ್' ಹಾಗೂ 'ನ್ಯುಮೋನಿಯಾ'ಗಳಿಗೆ ರೋಗಿ ಬಲಿಯಾಗಬಹುದು.

**ಹರಡುವ ವಿಧಾನ** : ಮಗುವಿನ ಕೆಮ್ಮು, ಕಫ ಹಾಗೂ ಮೂಗಿನಿಂದ ಸೋರುವ ದ್ರವಗಳಿಂದ ರೋಗಜಂತುಗಳು ಹವೆಯಲ್ಲಿ ಸೇರಿ ಬೇರೆಯವರಿಗೆ ರೋಗ ಹರಡುತ್ತದೆ. ಮಗುವಿಗೆ ಜ್ವರ ಬಂದಾಗಿನಿಂದ ಪೂರ್ತಿ ಕೆಮ್ಮು ನಿಲ್ಲುವವರೆಗೆ ಈ ರೋಗ ಜಂತುಗಳು ಹವೆಯಲ್ಲಿ ಸೇರಿ ಬೇರೆಯವರಿಗೆ ರೋಗ ಹರಡ ಬಲ್ಲವು.

**ರೋಗ ಪ್ರತಿಬಂಧಕ ಉಪಾಯಗಳು** :(i) ರೋಗಿಯನ್ನು ಉಳಿದ ಮಕ್ಕಳಿಂದ ಬೇರ್ಪಡಿಸಿ ಉಪಚರಿಸುವದು (ii) ರೋಗ ಪ್ರತಿಬಂಧಕ ಚುಚ್ಚುಮದ್ದನ್ನು ೩, ೪, ೫ ನೆಯ ತಿಂಗಳುಗಳಲ್ಲಿ ಮಗುವಿಗೆ ಹಾಕಿಸುವದು.

**ಹವೆಯ ಮೂಲಕ ಹರಡುವ ರೋಗಗಳನ್ನು ಪ್ರತಿಬಂಧಿಸುವ ಸಾಮಾನ್ಯ ಕ್ರಮಗಳು :**

(೧) ರೋಗಿಯನ್ನು ಪತ್ತೆಹಚ್ಚಿ ಅವನನ್ನು ಪ್ರತ್ಯೇಕ ಕೋಣೆಯಲ್ಲಿ ಉಪಚರಿಸುವದು.

(೨) ರೋಗಿಯ ಕಫ, ಮಲಮೂತ್ರಗಳನ್ನು ಕ್ರಿಮಿನಾಶಕಗಳಿಂದ ನಾಶಪಡಿಸಬೇಕು. ಇಲ್ಲವೇ ಸುಡಬೇಕು.

(೩) ರೋಗಿಯ ಪಾತ್ರೆ, ಬಟ್ಟೆಗಳನ್ನು ಬೇರೊಬ್ಬರು ಉಪಯೋಗಿಸದಿರುವದು.

(೪) ರೋಗಿಯನ್ನು ಉಪಚರಿಸುವವರು ಪ್ರತಿಬಂಧಕ ಚುಚ್ಚುಮದ್ದು ಹಾಕಿಸಿಕೊಳ್ಳುವದು. ಮುಖಕ್ಕೆ ಮುಖವಾಡ ಕಟ್ಟಿಕೊಂಡು ರೋಗಿಯ ಉಪಚಾರ ಮಾಡುವದು.

(೫) ರೋಗಿಯ ಕೋಣೆಯಲ್ಲಿ ಅನವಶ್ಯಕ ವಸ್ತುಗಳನ್ನಿಡ ಕೂಡದು. ಕೋಣೆಯ ಕಸಗೂಡಿಸುವಾಗಲೂ ಮುಖವಾಡ ಧರಿಸ ಬೇಕು.

(೬) ಸಾರ್ವಜನಿಕ ಸ್ಥಳಗಳಲ್ಲಿ ಉಗುಳುವದು, ಮಲ ಮೂತ್ರ ವಿಸರ್ಜನೆ ಮಾಡುವದು ಇವುಗಳನ್ನು ಪ್ರತಿಬಂಧಿಸ ಬೇಕು. ಮುಖಕ್ಕೆ ವಸ್ತ್ರಹಿಡಿದು ಕೆಮ್ಮಬೇಕು.

## ೩. ಆಹಾರ ಮತ್ತು ನೀರಿನಿಂದ ಹರಡುವ ರೋಗಗಳು

**ವಿಷಮಜ್ವರ**: 'ಸಾಲ್ಮೊನೆಲ್ಲಾ' ಜಾತಿಗೆ ಸೇರಿದ ಸೂಕ್ಷ್ಮ ರೋಗಜಂತುಗಳಿಂದ ಈ ರೋಗ ಮನುಷ್ಯರಿಗೆ ಬರುತ್ತದೆ. ಈ ರೋಗಿಯನ್ನು ಉಪಚರಿಸುವವರು ಅಜಾಗರೂಕರಾಗಿದ್ದರೆ ಅವರಿಗೆ ಹರಡುವ ಸಂಭವ ಜಾಸ್ತಿ. ಆಹಾರ ಮತ್ತು ನೀರು,

ರೋಗಾಣು ಮಿಶ್ರಿತ ಮಲಮೂತ್ರಗಳಿಂದ ದೂಷಿತವಾಗಿ ರೋಗ ಹರಡುವುದು ನೊಣಗಳು ಮತ್ತು ಸ್ವತಃ ರೋಗದಿಂದ ಬಳಲದೇ ರೋಗ ಜಂತುಗಳನ್ನು ಮಲದಲ್ಲಿ ವಿಸರ್ಜಿಸುವವರು ಸಾಂಕ್ರಾಮಿಕತೆಗೆ ಕಾರಣರು.

**ಲಕ್ಷಣಗಳು:** ತಲೆನೋವು, ಒಂದೇ ಸಮನೆ ವಾರಕ್ಕಿಂತಲೂ ಹೆಚ್ಚು ದಿನ ಜ್ವರ ಬರುವದು. ಕೆಲವೊಮ್ಮೆ ಭೇದಿ,ನಿಃಶಕ್ತಿ ಇತ್ಯಾದಿ.

**ಪ್ರತಿಬಂಧಕ ಉಪಾಯುಗಳು :** (೧)ಮಲಮೂತ್ರಗಳಲ್ಲಿ ರೋಗಜಂತುಗಳನ್ನು ವಿಸರ್ಜಿಸುವವರನ್ನು ಪತ್ತೆಹಚ್ಚಿ ಉಪಚರಿಸುವದು.

(೨) ಸಾಂಕ್ರಾಮಿಕ ಕಾಲದಲ್ಲಿ ವಾರಕ್ಕೆ ೧ರಂತೆ ೨ ಸಲ ಪ್ರತಿಬಂಧಕ ಚುಚ್ಚು ಮದ್ದು ಹಾಕಿಸಿಕೊಳ್ಳುವದು.

## ವಾಂತಿ, ಭೇದಿ ಮತ್ತು ರಕ್ತ, ಆಮಶಂಕೆ

'ಶಿಗೆಲ್ಲಾ' ಮತ್ತು 'ಎಂಟಮೀಬಾ ಹಿಸ್ಟಲಿಟಿಕಾ' ಎಂಬ ರೋಗ ಜಂತು, ಜಂತುಗಳಿಂದ ಈ ರೋಗಗಳು ಬರುತ್ತವೆ. ವಾಂತಿ ಭೇದಿ ಮಕ್ಕಳಲ್ಲಿ ಹೆಚ್ಚಾಗಿ ಕಾಣಿಸಿಕೊಂಡರೆ, ರಕ್ತ ಆಮಶಂಕೆ ದೊಡ್ಡವರಲ್ಲಿ ಜಾಸ್ತಿ.

**ಲಕ್ಷಣಗಳು :** ವಾಂತಿಭೇದಿ, ನೀರಡಿಕೆ, ನಿಶ್ಶಕ್ತಿ, ನಾಲಿಗೆ ಒಣಗುವದು. ಕೂಡಲೇ ಕ್ರಮ ತೆಗೆದುಕೊಳ್ಳದಿದ್ದರೆ ಮಗುವಿನ ಜೀವಕ್ಕೆ ಅಪಾಯವುಂಟು. ದೊಡ್ಡವರಲ್ಲಿ ಮಲದಲ್ಲಿ ರಕ್ತ ಹಾಗೂ ಆಮ ಕಾಣಿಕೊಳ್ಳುತ್ತದೆ. ಹೊಟ್ಟೆ ಮುರಿಯುವದು, ನಿಶ್ಶಕ್ತಿ ಇತ್ಯಾದಿ.

**ರೋಗಪ್ರತಿಬಂಧಕ ಉಪಾಯಗಳು :** (೧) ಸಾರ್ವಜನಿಕ ಸ್ಥಳಗಳಲ್ಲಿ ಮಕ್ಕಳು ಹಾಗೂ ದೊಡ್ಡವರು ಮಲಮೂತ್ರ ಮಾಡದಂತೆ ಕ್ರಮ ತೆಗೆದುಕೊಳ್ಳಬೇಕು.

(೨) ಮಲದಲ್ಲಿ ರೋಗಜಂತುಗಳನ್ನು ವಿಸರ್ಜಿಸುವವರನ್ನು ಪತ್ತೆ ಹಚ್ಚಿ ಉಪಚರಿಸುವದು.

## ಕಾಲರಾ (ಮಾರೀಬೇನೆ)

'ವಿಬ್ರಿಯೋ ಕಾಲರಾ' ಮತ್ತು 'ವಿಬ್ರಿಯೋ ಎಲ್ಟಾರ್' ಎಂಬ ರೋಗಜಂತುಗಳಿಂದ ಈ ರೋಗ ಬರುತ್ತದೆ. ಆಹಾರ, ನೀರುಗಳು ರೋಗಜಂತುಗಳಿಂದ ದೂಷಿತಗೊಳ್ಳುವದು ಸಾಂಕ್ರಮಿಕತೆಯ ಮುಖ್ಯ ಕಾರಣ. ನೊಣಗಳು ಮತ್ತು ರೋಗಜಂತುಗಳನ್ನು ಮಲ, ವಾಂತಿಗಳಲ್ಲಿ ವಿಸರ್ಜಿಸುವವರು ರೋಗವನ್ನು ಹರಡಲು ಕಾರಣರು.

**ಲಕ್ಷಣಗಳು :** ಪುನಃ ಪುನಃ ಗಂಜಿಯಂತಹ ಭೇದಿ, ವಾಂತಿ, ನೀರಕಡಿ, ನಾಲಿಗೆ ಒಣಗುವದು, ನಿಶ್ಯಕ್ತಿ ಇತ್ಯಾದಿ ಕೂಡಲೇ ಉಪಚರಿಸದಿದ್ದರೆ ಸಾವು ಖಂಡಿತ.

**ಪ್ರತಿಬಂಧಕ ಉಪಾಯಗಳು :** (೧) ಸಾಂಕ್ರಮಿಕ ಕಾಲದಲ್ಲಿ ನೀರನ್ನು ಕಾಯಿಸಿ ಕುಡಿಯುವದು (೨) ಕಾಲರಾ ಪ್ರತಿಬಂಧಕ ಚುಚ್ಚುಮದ್ದು ಹಾಕಿಸಿಕೊಳ್ಳುವದು.

## ಪೋಲಿಯೋ

'ವೈರಸ್'ನಿಂದ ಬರುವ ಈ ರೋಗ ಸುಧಾರಿಸಿದ ಜೀವನ ಸಾಗಿಸುತ್ತಿರುವವರ ಮಕ್ಕಳಲ್ಲಿ ಕಾಣಿಸಿಕೊಳ್ಳುತ್ತದೆ. ಅಷ್ಟೊಂದು

ಸ್ಥಿತಿವಂತರಲ್ಲದ, ಆರೋಗ್ಯದ ನಿಯಮಗಳನ್ನು ಪಾಲಿಸಿದವರ ಮಕ್ಕಳಲ್ಲಿ ರೋಗ ಕಾಣಿಸಿಕೊಳ್ಳದಿದ್ದರೂ ರೋಗ ನಿರೋಧಕ ಶಕ್ತಿ ಬೆಳೆದಿರುತ್ತದೆ. ಯಾಕೆಂದರೆ ಈ ಮಕ್ಕಳು ಕೈಗಳನ್ನು ಸರಿಯಾಗಿ ತೊಳೆಯದೆ ತಿನ್ನುವದರಿಂದ. ರೋಗಜಂತುಗಳು ಅವರ ಶರೀರದಲ್ಲಿ ಸೇರಿ, ಅವರ ಶರೀರದಲ್ಲಿ ಸೇರಿ, ಅವರ ರೋಗ ತಡೆಯುವ ಶಕ್ತಿಯನ್ನು ಹೆಚ್ಚಿಸುತ್ತವೆ. ಈ ಮಾತು ಉಳಿದ ಸಾಂಸರ್ಗಿಕ ರೋಗಗಳಿಗೆ ಅನ್ವಯಿಸದು. ಯಾಕೆಂದರೆ ಉಳಿದ ರೋಗಜಂತುಗಳು ಶರೀರದಲ್ಲಿ ಸೇರಿದರೆ ರೋಗವನ್ನೇ ಉಂಟು ಮಾಡುತ್ತವೆ. ಪೋಲಿಯೋ ರೋಗಿಯ ಮಲದಲ್ಲಿ, ರೋಗ ಜಂತುಗಳು ವಿಸರ್ಜಿಸಲ್ಪಡುತ್ತವೆ.

**ರೋಗದಲಕ್ಷಣಗಳು :** ಜ್ವರ, ಗಂಟಲುನೋವು, ತಲೆನೋವು ಕಾಣಿಸಿಕೊಂಡನಂತರ, ಕೈಯ್ಯಲ್ಲಾಗಲೀ, ಕಾಲಲ್ಲಾಗಲೀ, ಶಕ್ತಿ ಕಡಿಮೆಯಾಗುತ್ತದೆ. ಸಾಂಕ್ರಮಿಕ ಕಾಲದಲ್ಲಿ 'ಟಾನ್‌ಸಿಲ್ಸ್' ತೆಗೆಯಿಸುವದರಿಂದ, ಸಣ್ಣ. ಸಣ್ಣ ಆಪರೇಶನ್‌ಗಳಿಂದ, ಇಂಜೆಕ್ಷನ್ ಕೊಡಿಸುವದರಿಂದ ರೋಗ ಕಾಣಿಸಿಕೊಳ್ಳುತ್ತದೆ.

**ಪ್ರತಿಬಂಧಕ ಉಪಾಯಗಳು :** (೧) ಮಗುವಿಗೆ ೩, ೪, ೫ ನೆಯ ತಿಂಗಳುಗಳಲ್ಲಿ ಪೋಲಿಯೋ ಹನಿಗಳನ್ನು ಹಾಕಿಸಬೇಕು.

## ಕಾಮಾಲೆ ರೋಗ

ಬಹುಶಃ ವೈರಸ್‌ನಿಂದ ಬರುವ ಈ ರೋಗ ನೀರು ಮತ್ತು ಆಹಾರಗಳು ರೋಗಿಯ ಮಲದಿಂದ ದೂಷಿತವಾಗುವದರಿಂದ ಹರಡುತ್ತದೆ.

**ಲಕ್ಷಣಗಳು:** ಹಸಿವಾಗದಿರುವದು, ಜ್ವರ, ಹೊಟ್ಟೆ ನೋವು. ಕಾವಮಾಲೆ. ಕೆಲವೊಮ್ಮೆ ರೋಗ ಉಲ್ಬಣಗೊಂಡು ಜಠರದಿಂದ ರಕ್ತಸ್ರಾವವಾಗಬಹುದು. ಯೋಗ್ಯ ಉಪಚಾರ ವಿಲ್ಲದಿದ್ದರೆ ಸಾವಿನ ಪ್ರಮಾಣ ಹೆಚ್ಚು.

**ಪ್ರತಿಬಂಧಕ ಉಪಾಯುಗಳು:** (೧) ಮಲವಿಸರ್ಜನೆಯ ನಂತರ ಸಾಬೂನಿನಿಂದ ಚನ್ನಾಗಿ ಕೈತೊಳೆದುಕೊಳ್ಳಬೇಕು. (೨) ರೋಗಕ್ಕೆ ಬಲಿಯಾಗಬಹುದಾದ ಮಕ್ಕಳಿಗೆ ಗರ್ಭಿಣಿಯ ವರಿಗೆ ಗ್ಯಾವಗ್ಲೊಲಿನ್ ಕೊಡಿಸಿ ರೋಗ ಪ್ರತಿಬಂಧಕ ಶಕ್ತಿ ಹೆಚ್ಚಿಸಬೇಕು,

## ಜಂತುಹುಳುಗಳ ಭಾಧೆ

ಮಕ್ಕಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳಬಹುದು. ೪"ರಿಂದ ೧೪" ಉದ್ದವಿರುವ ಇವುಗಳಲ್ಲಿ ಗಂಡು ಹೆಣ್ಣಿಗಿಂತ ಸಣ್ಣದಿರುತ್ತದೆ.

ಲಕ್ಷಣಗಳು: ಹೊಟ್ಟೆನೋವು, ನಡುಕ, ವ್ಮೈಕಡಿತ, ಕರುಳು ಗಂಟು ಹಾಕುವದು. ಹಲವು ಹುಳುಗಳಿಂದ, ನೂರಾರು ಹುಳುಗಳವರೆಗೆ ಒಂದೇ ವ್ಯಕ್ತಿಯಲ್ಲಿ ಇವು ಇರಬಹುದು, ಮಲ ದಲ್ಲಿ, ವಾಂತಿಯಲ್ಲಿ. ಮೂಗಿನಿಂದ ಇವು ಹೊರಬರಬಹುದು. ಮಲದ ಸೂಕ್ಷ್ಮ ಪರೀಕ್ಷೆಯಿಂದ ತತ್ತಿಗಳನ್ನು ಗುರುತಿಸಬಹುದು.

ಪ್ರತಿಬಂಧಕ ಉಪಾಯುಗಳು: **ಸಿಕ್ಕ. ಸಿಕ್ಕಲ್ಲಿ ಮಲವಿಸ** ರ್ಜನೆ ಮಾಡದಿರುವದು. (೨) ಕಾಯಿಪಲ್ಲೆ, ಹಂಣುಹಂಪಲು ಗಳನ್ನು ಚನ್ನಾಗಿ ಬಿಸಿನೀರಿನಿಂದ ತೊಳೆದು ತಿನ್ನಬೇಕು. (೩) ಬಳಲುತ್ತಿರುವವರಿಗೆ ಯೋಗ್ಯ ಉಪಚಾರ ಮಾಡಿಸಬೇಕು.

## ನಾರುಹುಳು ಭಾಧೆ

ಭಾರತದ ಪಶ್ಚಿಮಭಾಗದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಹೆಚ್ಚಾಗಿರುವ ಈ ಹುಳುಬಾಧೆ, ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ, ಹಳ್ಳಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಹೊಕ್ಕು ತುಂಬುವ ಭಾವಿ, ಹೊಂಡ, ಕೆರೆಗಳಿರುವ ಭಾಗಗಳಲ್ಲಿ ಈ ರೋಗವಿರುತ್ತದೆ.

ಲಕ್ಷಣಗಳು : ಕಾಲುಬಾಯುವದು, ಜ್ವರ, ಗಡ್ಡೆ, ಮೈ ತುರಿಕೆ ಹಾಗೂ ಬಿಳಿಯ ನಾರಿನಂತಹ ಹುಳು ಗಡ್ಡೆಯಿಂದ ಹೊರ ಬರುವದು.

ಪ್ರತಿಬಂಧಕ ಉಪಾಯಗಳು : (೧) ಹೊಕ್ಕುತುಂಬುವ ಹೊಂಡ, ಕೆರೆ ಭಾವಿಗಳಲ್ಲಿಯ ನೀರನ್ನು ಕುಡಿಯಲು ಉಪ ಯೋಗಿಸದಿರುವದು. (೨) ಕುಡಿಯಲೇ ಬೇಕಾದರೆ ಕುದಿಸಿ ಕುಡಿಯಬೇಕು. (೩) ಅಂಥನೀರಿನಲ್ಲಿ Barbel (ಬಾರ್ಬೆಲ್) ಮೀನು ಬೆಳೆಸುವದು ಈ ಮೀನಗಳು ನಾರುಹುಳುವಿನ ಮರಿ. ಸೈಕ್ಲೋಪ್‌ಗಳನ್ನು ತಿನ್ನುವವು. (೪) ನಾರು ಹುಳುವಿನ ಬಾಧೆ ಯಿಂದ ಬಳಲುವವರನ್ನು ನೀರಿನಲ್ಲಿ ಕಾಲು ತೊಳೆಯಲು ಅವ ಕಾಶ ಕೊಡದಿರುವದು.

## ಕೊಕ್ಕೆಹುಳು ಬಾಧೆ

ಈ ಹುಳು ಬಾಧೆ ನಮ್ಮ ದೇಶದ ಪಶ್ಚಿಮ ಬಂಗಾಲ ಮತ್ತು ದಕ್ಷಿಣ ಭಾರತದ ಚಹ, ಕಾಫೀ ತೋಟಗಳಲ್ಲಿ ಕೆಲಸ ಮಾಡುವವನಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಚರ್ಮದ

ಗಾಯಗಳ ಮೂಲಕ ಈ ಹುಳುಗಳು ರಕ್ತನಾಳಗಳನ್ನು ಸೇರಿ ಅಲ್ಲಿಂದ ಕರುಳು ಪ್ರವೇಶಿಸಿ ರಕ್ತ ಹೀರುತ್ತವೆ.

ಸಮಾಜದ ಮೇಲಾಗುವ ಪರಿಣಾಮಗಳು : (೧) ಮನುಷ್ಯ ನಲ್ಲಿ ರಕ್ತ ಹೀನತೆಯಿಂದ ದುಡಿಯುವ ಶಕ್ತಿ ಕಡಿಮೆಯಾಗುತ್ತದೆ. (೨) ರೋಗ ನಿರೋಧಕ ಶಕ್ತಿ ಕಡಿಮೆಯಾಗುತ್ತದೆ. (೩) ಮಕ್ಕಳಲ್ಲಿ ದೈಹಿಕ ಮತ್ತು ಬೌದ್ಧಿಕ ಬೆಳವಣಿಗೆ ಕುಂಠಿತವಾಗುತ್ತದೆ. (೪) ಬಂಜೆತನ, ಹೊಟ್ಟೆಹೋಗುವದು ಮತ್ತು ಮಕ್ಕಳಿಗೆ ಮೊಲೆ ಹಾಲಿನ ಕೊರತೆ.

ಲಕ್ಷಣಗಳು : ರಕ್ತ ಹೀನತೆ, ಎದೆ ಬಡಿತ ಹೆಚ್ಚುವದು. ದಮ್ಮು ಮತ್ತು ನಿಶ್ಶಕ್ತಿ.

ಪ್ರತಿಬಂಧಕ ಉಪಾಯಗಳು : (೧) ಹುಳುಗಳ ಬಾಧೆ ಯಿಂದ ಬಳಲುವವರನ್ನು ಮತ್ತೆ ತತ್ತಿಗಳನ್ನು ವಿಸರ್ಜಿಸುವವರನ್ನು ಪತ್ತೆಹಚ್ಚಿ ಉಪಚರಿಸುವದು. (೨) ಸಿಕ್ಕ ಸಿಕ್ಕಲ್ಲಿ ಮಲವಿಸರ್ಜನೆ ನಿಲ್ಲಿಸುವದು. (೩). ಕಾಲಲ್ಲಿ ಬೂಟು ಹಾಕಿಕೊಂಡು ಕೆಲಸ ಮಾಡು ವದು.

## ಆಹಾರ ಮತ್ತು ನೀರಿನ ಮೂಲಕ ಹರಡುವ ರೋಗಗಳನ್ನು ತಡೆಗಟ್ಟುವ ಸಾಮಾನ್ಯ ವಿಧಾನಗಳು

(೧) ರೋಗಿಯನ್ನು ಪತ್ತೆಹಚ್ಚಿ ಅವನನ್ನು ಪ್ರತ್ಯೇಕ ಕೋಣೆಯಲ್ಲಿ ಉಪಚರಿಸುವದು.

(೨) ರೋಗಿಯ ಮಲ, ಮೂತ್ರಗಳನ್ನು ಕ್ರಿಮಿನಾಶಕ ಗಳಿಂದ ಉಪಚರಿಸಿ ನಾಶಪಡಿಸಬೇಕು.

(೩) ರೋಗಿಯ ಪಾತ್ರೆ, ಬಟ್ಟೆಗಳನ್ನು ಬೇರೊಬ್ಬರು ಉಪಯೋಗಿಸದಿರುವದು.

(೪) ರೋಗಿಯನ್ನು ಉಪಚರಿಸುವವರು ಪ್ರತಿಬಂಧಕ ಚುಚ್ಚುಮದ್ದು ಹಾಕಿಸಿಕೊಳ್ಳಬೇಕು.

(೫) ಸಾಂಕ್ರಮಿಕ ವೇಳೆಯಲ್ಲಿ ನೀರನ್ನು ಕುದಿಸಿ ಆರಿಸಿ ಕುಡಿಯಬೇಕು.

(೬) ಆಹಾರದ ಪಾತ್ರೆಗಳ ಮೇಲೆ ಯಾವಾಗಲೂ ಮುಚ್ಚಿಡಬೇಕು.

(೭) ಆಹಾರ ಸೇವಿಸುವವರು ಮತ್ತು ಬಡಿಸುವವರು ವಾರಕ್ಕೊಮ್ಮೆ ಉಗುರು ತೆಗೆದುಕೊಳ್ಳಬೇಕು. ಮತ್ತು ಸ್ವಚ್ಛವಾಗಿ ಕೈತೊಳೆದುಕೊಂಡು ಆಹಾರ ಸೇವಿಸಬೇಕು.

(೮) ಸಾರ್ವಜನಿಕ ಸ್ಥಳಗಳಲ್ಲಿ ಮಲಮೂತ್ರ ವಿಸರ್ಜಿಸ ಬಾರದು.

(೯) ಸಾರ್ವಜನಿಕ ಭಾವಿಗಳಲ್ಲಿ ತಂತಮ್ಮ ಸ್ವಂತದ ಪಾತ್ರೆ ಗಳನ್ನು ಅದ್ದುವದಕ್ಕಿಂತ ಒಂದೇ ಪಾತ್ರೆಯನ್ನಿಟ್ಟು ನೀರೆತ್ತಬೇಕು.

೧೦ ಹಣ್ಣು ಹಂಪಲು, ಕಾಯಿಪಲ್ಲೆಗಳನ್ನು ಸ್ವಚ್ಛವಾಗಿ ತೊಳೆದು ಉಪಯೋಗಿಸಬೇಕು.

## ೪. ಪ್ರಾಣಿಗಳಿಂದ ಹರಡುವ ರೋಗಗಳು

**ಹುಚ್ಚುನಾಯಿ ರೋಗಗಳು :**

ಸಾಮಾನ್ಯವಾಗಿ ಪ್ರಾಣಿಗಳಲ್ಲಿ ಕಂಡುಬರುವ ಈ ರೋಗ ವೈರಸ್‌ನಿಂದ ಬರುತ್ತದೆ. ರೋಗದಿಂದ ಬಳಲುವ ನಾಯಿ. ಮನುಷ್ಯನನ್ನು ಕಚ್ಚಿದರೆ ಅವನಿಗೆ ರೋಗವುಂಟಾಗುತ್ತದೆ. ನೀರಿನ ಭಯ ಈ ರೋಗದ ಮುಖ್ಯ ಲಕ್ಷಣ. ನೀರಿನ ಸದ್ದು ಇಲ್ಲವೇ ಸಾಮಿಪ್ಯದಿಂದ. ನುಂಗುವ ಸ್ನಾಯುಗಳೆಲ್ಲ ಆಕುಂಚನ ಹೊಂದಿ ನುಂಗುವದು ದುಸ್ತರವಾಗುತ್ತದೆ ರೋಗ ಜಂತುಗಳು ಮುಖ್ಯವಾಗಿ ಮೆದುಳಿನ ಕಣಗಳ ಮೇಲೆ ಪರಿಣಾಮ ಮಾಡುತ್ತವೆ. ನಾಯಿ ಕಚ್ಚಿದ ೧ ರಿಂದ ೨ ತಿಂಗಳುಗಳಲ್ಲಿ ರೋಗ ಕಾಣಿಸಿಕೊಳ್ಳುತ್ತದೆ. ಕಚ್ಚಿದ ಜಾಗ, ಗಾಯಗಳ ಸಂಖ್ಯೆ, ಮೆದುಳಿಗೆ ಗಾಯದ ಸಾಮಿಪ್ಯ, ಹಾಗೂ ಕಚ್ಚಿದ ಮೇಲೆ ರೋಗಿ ಮಾಡಿಸಿಕೊಂಡ ಉಪಚಾರದ ಮೇಲೆ ರೋಗದ ಭೀಕರತೆ ಮತ್ತು ರೋಗ ಕಾಣಿಸಿಕೊಳ್ಳುವ ವೇಳೆ ಅವಲಂಬಿತವಾಗಿರುತ್ತವೆ. ರೋಗ ಕಾಣಿಸಿಕೊಂಡ ಮೇಲೆ ಮರಣ ನೂರಕ್ಕೆ ನೂರರಷ್ಟು ನಿಶ್ಚಿತ. ಕಚ್ಚಿದ ಒಂದುವಾರದಿಂದ ಎರಡು ವಾರಗಳೊಳಗೆ ಪ್ರತಿಬಂಧಕ ಚುಚ್ಚುಮದ್ದನ್ನು ಪ್ರಾರಂಭಿಸಿದರೆ ರೋಗವನ್ನು ತಡೆಗಟ್ಟುವ ಸಾಧ್ಯತೆ ಹೆಚ್ಚು.

**ಪ್ರತಿಬಂಧಕ ಉಪಾಯಗಳು :** (೧) ಗಾಯವನ್ನು ಸಾಬೂನು ಹಾಗೂ ನೀರಿನಿಂದ ಸ್ವಚ್ಛವಾಗಿ ತೊಳೆಯುವದು

ಮತ್ತು ಕಾರ್ಬೋಲಿಕ್ ಆಸಿಡ್ಡಿನಿಂದ ಸುಡುವದು.

(೨) ರೋಗ ಪ್ರತಿಬಂಧಕ ಚುಚ್ಚುಮದ್ದು ಕೊಡಿಸುವದು.

(೩) ತಾತ್ಪೂರ್ತಿಕ ರೋಗ ನಿರೋಧಕ ಶಕ್ತಿ ಹೆಚ್ಚಿಸುವ ಎ. ಆರ್. ಎಸ್. ಕೊಡಿಸುವದು.

(೪) ರೋಗಿಯನ್ನು ಉಪಚರಿಸುವವರು ಕೈಚೀಲ ಹಾಗೂ ಮುಖವಾಡ ಧರಿಸಿ ಉಪಚಾರಮಾಡುವದು.

## ಧನುರ್ವಾತ ರೋಗ

ಮಣ್ಣಿನಲ್ಲಿರುವ 'ಕ್ಲಾಸ್ಟ್ರಿಡಿಯಂ ಟೆಟಾನಿ' ಎಂಬ ರೋಗ ಜಂತುಗಳಿಂದ ಈ ರೋಗ ಬರುತ್ತದೆ ಈ ರೋಗಜಂತುಗಳು ಪ್ರಾಣಿಗಳ ಶರೀರವನ್ನು ಸೇರಿ ಅಲ್ಲಿ ವೃದ್ಧಿಗೊಂಡು ಅವುಗಳ ಮಲದ ಮೂಲಕ ವಿಸರ್ಜಿಸಲ್ಪಡುತ್ತವೆ. ಹೀಗೆ ವಿಸರ್ಜಿಸಲ್ಪಟ್ಟ ರೋಗ ಜಂತುಗಳು ಗಾಯಗಳ ಮೂಲಕ ಶರೀರವನ್ನು ಸೇರಿ ರೋಗವನ್ನುಂಟು ಮಾಡುತ್ತವೆ. ಗಾಯವಾದೊಡನೆ ಅದರ ಮೇಲೆ ಮಣ್ಣನ್ನು ಅಥವಾ ಪ್ರಾಣಿಗಳ ಮಲವನ್ನು ಹಾಕುವದಾಗಲೀ, ಆದೇ ಜನಿಸಿದ ಮಕ್ಕಳ ಹೊಕ್ಕಳು ಹುರಿಕೊಯ್ಯುವಾಗ ಜಂಗು ಹತ್ತಿದ ಶಸ್ತ್ರಗಳನ್ನು ಉಪಯೋಗಿಸುವದಾಗಲೀ ತುಂಬ ಅಪಾಯದ ಕೆಲಸ.

ರೋಗದ ಲಕ್ಷಣಗಳು : ಗಾಯವು ರೋಗ ಜಂತುಗಳಿಂದ ಮಲೀನವಾದ ಮೇಲೆ ಒಂದು ವಾರದಲ್ಲಿ ಬಾಯಿ ತೆಗೆಯಲು ಬರದಂತಾಗುತ್ತದೆ. ಶರೀರದ ಸ್ನಾಯುಗಳೆಲ್ಲ ಕ್ರಮವಾಗಿ ಆಕುಂಚನ ಪ್ರಾಸರಣಗೊಳ್ಳಲಾರಂಭಿಸುತ್ತದೆ. ಪುಪ್ಪಸದ ವಪೆಯ

ಇಲ್ಲವೇ ಶ್ವಾಸೋಚ್ಛ್ವಾಸದ ಸ್ನಾಯುಗಳು ನಿಷ್ಕ್ರಿಯೆಗೊಳ್ಳುವದರಿಂದ ಶ್ವಾಸೋಚ್ಛ್ವಾಸವೇ ನಿಂತು ಹೋಗುವ ಸಂಭವವಿರುತ್ತದೆ. ಮಕ್ಕಳಲ್ಲಿ, ಹೆರಿಗೆಯಾದ ಸ್ತ್ರೀಯರಲ್ಲಿ ರೋಗ ಕಾಣಿಸಿಕೊಂಡರೆ ಸಾವಿನ ಸಂಖ್ಯೆ ಜಾಸ್ತಿಯಾಗುತ್ತದೆ.

ರೋಗ ಪ್ರತಿಬಂಧಕ ಉಪಾಯುಗಳು: (೧) ಗಾಯುವನ್ನು ಕೂಡಲೇ ತೊಳೆದು ಕಾರ್ಬೋಲಿಕ್ ಆಸಿಡ್‌ನಿಂದ ಸುಡುವದು. (೨) A. T. S. ಮತ್ತು ರೋಗ ನಿರೋಧಕ ಚುಚ್ಚುಮದ್ದು ಕೊಡಿಸುವದು. (೩) ಮಕ್ಕಳಿಗೆ ೩, ೪, ೫ ನೆಯ ತಿಂಗಳುಗಳಲ್ಲಿ ತಿಂಗಳಿಗೆ ಒಂದರಂತೆ ರೋಗ ನಿರೋಧಕ ಚುಚ್ಚುಮದ್ದು ಹಾಕಿಸಬೇಕು. (Tet toxuid). (೪) ಹೆರಿಗೆ ಮಾಡಿಸುವವರು ಮತ್ತು ಶಸ್ತ್ರಚಿಕಿತ್ಸೆ ಮಾಡುವವರು ಶುದ್ಧೀಕರಣಗೊಳಿಸಿದ ಶಸ್ತ್ರಗಳನ್ನು ಉಪಯೋಗಿಸಬೇಕು. (೫) ಗಾಯುಗಳು ಪ್ರಾಣಿಗಳ ಮಲ ಹಾಗೂ ಮಣ್ಣಿನಿಂದ ದೂಷಿತವಾಗದಂತೆ ಜಾಗ್ರತೆ ವಹಿಸಬೇಕು.

(೬) ಗಾಯುಗಳಾದ ಮೇಲೆ ಅಲಕ್ಷಿಸದೇ ರೋಗನಿರೋಧಕ ಚುಚ್ಚುಮದ್ದನ್ನು ತೆಗೆದುಕೊಳ್ಳುವಂತೆ ಜನರಿಗೆ ತಿಳುವಳಿಕೆ ನೀಡುವದು (Tet toxuid).

## ಆ್ಯಂಥ್ರ್ಯಾಕ್ಸ್ (Anthrax)

'ಬೆಸಿಲಸ್ ಆ್ಯಂಥ್ರ್ಯಾಸಿಸ್ ಎಂಬ ರೋಗಜಂತುಗಳಿಂದ ಬರುವ ಈ ರೋಗ ಮೂಲತಃ ದನ. ಕುರಿ, ಆಡುಗಳಲ್ಲಿರುತ್ತದೆ. ರೋಗದಿಂದ ಬಳಲುವ ಪ್ರಾಣಿಯು ಮಾಂಸ, ಕೂದಲು, ಉಣ್ಣೆಗಳಿಂದ ಮನುಷ್ಯನಿಗೆ ರೋಗ ಹರಡುತ್ತದೆ. ಅನೇಕ ವ್ಯವಸಾಯು

ಪ್ರಧಾನ ಇಲ್ಲವೇ ಔದ್ಯೋಗಿಕವಾಗಿ ಮುಂದುವರಿದ ರಾಷ್ಟ್ರಗಳಲ್ಲಿ ಈ ರೋಗ ಕಂಡುಬರುತ್ತದೆ.

**ರೋಗದ ಕಾರಣ, ಹರಡುವ ವಿಧಾನಗಳು ಮತ್ತು ಲಕ್ಷಣಗಳು**

ರೋಗದಿಂದ ಬಳಲುವ ಪ್ರಾಣಿಯ ಮಾಂಸವನ್ನು ಸೇವಿಸಿದಾಗ, ಆ ಪ್ರಾಣಿಯ ಕೂದಲು, ಉಣ್ಣೆಗಳಲ್ಲಿರುವ ರೋಗ ಜಂತುಗಳು ಹವೆಯ ಮೂಲಕ ಮನುಷ್ಯನ ಶ್ವಾಸಕೋಶವನ್ನು ಸೇರಿದಾಗ ಅಥವಾ ಗಾಯಗಳಲ್ಲಿ ರೋಗಜಂತುಗಳು ಸೇರುವದರಿಂದ (ಪ್ರಾಣಿಯ ಕೂದಲಿನಿಂದ ತಯಾರಿಸಿದ ಕ್ಷೌರದ ಬ್ರಶ್ ಮೂಲಕ) ಮನುಷ್ಯನಲ್ಲಿ ರೋಗ ಕಾಣಿಸಿಕೊಳ್ಳುತ್ತದೆ. ಇಂಥ ರೋಗದಿಂದ ಬಳಲುವ ಪ್ರಾಣಿಯ ಚರ್ಮ, ಎಲುಬುಗಳನ್ನು ಯಂತ್ರಾಗಾರಗಳಿಗೆ ಮಾರುವದರಿಂದ ಅಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ರೋಗ ತಗಲುವ ಸಾಧ್ಯತೆ ಉಂಟು.

**ರೋಗದ ಪ್ರಕಾರಗಳು ಮತ್ತು ಪ್ರತಿಬಂಧಕ ಉಪಾಯಗಳು**

**ವ್ಯವಸಾಯದಿಂದ ಬರುವ ಆ್ಯಂಥ್ರ್ಯಾಕ್ಸ್**

ಚರ್ಮದ ಮೇಲೆ ಹುಣ್ಣುಗಳಾಗಬಹುದು. ವಾಂತಿ, ಜ್ವರ ದಮ್ಮುಗಳು ಕಾಣಿಸಿಕೊಳ್ಳಬಹುದು. ರೋಗ ಕಾಣಿಸಿಕೊಳ್ಳುವ ಅವಧಿ ೨ ರಿಂದ ೫ ದಿನಗಳು.

(೧) ಎಲ್ಲ ಪ್ರಾಣಿಗಳಿಗೆ ಪ್ರತಿಬಂಧಕ ಚುಚ್ಚು ಮದ್ದು ಹಾಕಿಸಬೇಕು.

(೨) ರೋಗದ ಲಕ್ಷಣಗಳು ಕಂಡಕೂಡಲೇ ಯೋಗ್ಯ ಉಪಚಾರ ಮಾಡಬೇಕು.

(೩) ರೋಗದ ಪ್ರಾಣಿಯನ್ನು ಬೇರೆ ಪ್ರಾಣಿಗಳಿಂದ ಪ್ರತ್ಯೇಕಿಸಬೇಕು.

(೪) ಅದು ಸತ್ತರೆ ಚರ್ಮ, ಎಲುಗಳನ್ನು ಸುಡಬೇಕು. ಇಲ್ಲವೇ ಕ್ರಿಮಿನಾಶಕಗಳಿಂದ ಉಪಚರಿಸಿ ಆಳವಾಗಿ ಹೂಳಬೇಕು.

ಪ್ರತಿಬಂಧಕ ಉಪಾಯಗಳು: (೧) ಚರ್ಮಗಳನ್ನು ಕೂದಲುಗಳನ್ನು, ಉಣ್ಣೆಗಳನ್ನು ಶಾಸ್ತ್ರೀಯ ಪದ್ಧತಿಯಂತೆ ಶುದ್ಧೀಕರಣಗೊಳಿಸಬೇಕು. (೨) ಆ್ಯಂಥ್ರಾಕ್ಸ ರೋಗಜಂತುಗಳಿಂದ ಕಲುಷಿತವಾಗಿರಬಹುದಾದ ವಸ್ತುಗಳನ್ನು ಬೇರೆಯಾಗಿಡಬೇಕು. (೩) ಕಾರ್ಮಿಕರಿಗೆ ರಕ್ಷಣೆ ನೀಡಲು ಯೋಗ್ಯ ಕೈಚೀಲ, ಮುಖವಾಡಗಳನ್ನು ಒದಗಿಸಬೇಕು. (೪) ರೋಗದ ಬಗ್ಗೆ ಕಾರ್ಮಿಕರಿಗೆ ಸರಿಯಾದ ತಿಳುವಳಿಕೆ ನೀಡುವದು, (೫) ಕೂದಲು ಚರ್ಮ, ಉಣ್ಣೆಗಳನ್ನು ಹೆಗಲ ಮೇಲೆ ಹೊರಬಾರದು.

**ಪ್ರತಿಬಂಧಕ ಚುಚ್ಚುಮದ್ದುಗಳು:**

(೧) ಪ್ರಾಣಿಗಳಿಗೆ ಹಾಗೂ ಮನುಷ್ಯರಿಗೆ ರೋಗದೂಷಿತ ಪ್ರದೇಶಗಳಲ್ಲಿ ಪ್ರತಿಬಂಧಕ ಚುಚ್ಚು ಮದ್ದು ಹಾಕಿಸಬೇಕು.

(೨) Scallo's serum (ರೋಗದಿಂದ ಬಳಲುವ ಪ್ರಾಣಿಯಿಂದ ತೆಗೆದ ಶುದ್ಧೀಕೃತ ಔಷಧಿ) ಆ್ಯಂಥ್ರಾಕ್ಸ ರೋಗಿಗೆ ಉಪಯೋಗಿಸಿ ರೋಗದ ತೀವ್ರತೆಯನ್ನು ಕಡಿಮೆ ಮಾಡಬಹುದು.

## ೫. ತ್ವಚೆಯ ಸಂಪರ್ಕದಿಂದ ಬರುವ ರೋಗಗಳು

### ಕುಷ್ಠ ರೋಗ

'ಮೈಕೋ ಬೆಕ್ಟೀರಿಯಂ ಲೆಪ್ರ' ಎಂಬ ಸೂಕ್ಷ್ಮಾಣುವಿನಿಂದ ಈ ರೋಗಬರುತ್ತದೆ. ಈ ರೋಗ. ರೋಗಿಯ ತ್ವಚೆಯ ಸಂಪರ್ಕ ದಿಂದ ಹರಡುತ್ತದೆ. ಕುಷ್ಟರೋಗವಾದ ತ್ವಚೆಯ ಭಾಗ, ಬೇರೆ ವ್ಯಕ್ತಿಯ ತ್ವಚೆಗೆ ಮೇಲಿಂದ ಮೇಲೆ ಹತ್ತುತ್ತಿದ್ದರೆ, ರೋಗದ ಕಣಗಳು, ಆರೋಗ್ಯವಂತನ ಶರೀರ ಸೇರಿ ಅವನಿಗೆ ರೋಗವ ನ್ನುಂಟು ಮಾಡುತ್ತವೆ.

ರೋಗದ ಲಕ್ಷಣಗಳು: ಈ ರೋಗದಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳು.

i) ಟ್ಯೂಬರ ಕ್ಯುಲ್ಯಾಡ (Tuber culoid): ಸೌಮ್ಯವಾದ ಮತ್ತು ಕೈಕಾಲುಗಳ ನರಗಳಿಗೆ ಮುಖ್ಯವಾಗಿ ಬರುವ ರೋಗ. ರೋಗದ ಭಾಗ ಉಳಿದ ಭಾಗಗಳಿಗಿಂತ ಬಿಳಿದಾಗಿರುತ್ತದೆ. ಮತ್ತು ಸ್ಪರ್ಶಜ್ಞಾನವಿರುವದಿಲ್ಲ. ಬೆಂಕಿ ಹಾಗೂ ಪೆಟ್ಟುಗಳಿಂದ ಆಗುವ ಗಾಯಗಳು ಬೇಗ ಗುಣವಾಗುವದಿಲ್ಲ. ಯೋಗ್ಯ ಉಪ ಚಾರವಾಗದಿದ್ದರೆ ಕೈಕಾಲುಗಳ ಬೆರಳುಗಳು ಉದುರುತ್ತವೆ.

ii) ಲೆಪ್ರೊಮ್ಯಾಟಸ್ (Lepromatous): ಉಗ್ರಸ್ವರೂಪ ಮೈಮೇಲೆ ಎಲ್ಲ ಕಡೆಗೆ ಕಾಣಿಸಿಕೊಳ್ಳಬಹುದಾದ ರೋಗ. ರೋಗ

ವಾದ ಭಾಗಗಳಿಂದ ಮುಖದ ಮತ್ತು ಶರೀರದ ಸೂಕ್ಷ್ಮರೂಪ ರೇಷೆಗಳು ಮಾಯವಾಗಿ ಮುಖವು ಸಿಂಹದ ಮುಖದಂತೆ ಕಾಣುವದು. ಮೂಗಿನ ಸೇತುವೆ ಕುಸಿಯುವದು. ಇಂಥವರಿಂದ ರೋಗ ಸುಲಭವಾಗಿ ಹರಡುತ್ತದೆ. ರೋಗಿಯ ಮೂಗಿನಲ್ಲಿ ರೋಗಜಂತುಗಳಿರುತ್ತವೆ ಆದರೆ ಹವೆಯ ಮೂಲಕ ರೋಗ ಹರಡುವ ಸಾಧ್ಯತೆ ಬಹಳ ಕಡಿಮೆ. ಈ ರೋಗ ಒಬ್ಬರಿಂದ ಒಬ್ಬರಿಗೆ ಹರಡಲು ಅನೇಕ ತಿಂಗಳುಗಳಿಂದ ವರುಷಗಳು ತಗಲಬಹುದು.

ರೋಗಪ್ರತಿಬಂಧಕ ಉಪಾಯಗಳು : (೧) ರೋಗಿಯನ್ನು (ತಿಪೊರ್ರುಮ್ಯಾಟಸ್) ಪ್ರತ್ಯೇಕಿಸಿ ಉಪಚರಿಸುವದು.

(೨) ರೋಗದ ಬಗೆಗಿನ ತಪ್ಪುಕಲ್ಪನೆಗಳನ್ನು ಶಿಕ್ಷಣದ ಮೂಲಕ ಹೋಗಲಾಡಿಸುವದು. (ಕುಷ್ಟರೋಗವು ಒಂದು ಶಾಪವೆಂದು ಸಾಮಾನ್ಯ ಕಲ್ಪನೆ).

(೩) ಪೂರ್ಣ ಗುಣಮುಖವಾಗುವವರೆಗೆ ಔಷದೋಪಚಾರ (೨ ರಿಂದ ೫ ವರುಷಗಳವರೆಗೆ)

(೧) ಪ್ರಾಣಿಗಳಿಗೆ ಹಾಗೂ ಮನುಷ್ಯರಿಗೆ ರೋಗದೂಷಿತ ಪ್ರದೇಶಗಳಲ್ಲಿ ಪ್ರತಿಬಂಧಕ ಚುಚ್ಚು ಮದ್ದು ಹಾಕಿಸಬೇಕು.

(೨) Scalvo's serum (ರೋಗದಿಂದ ಬಳಲುವ ಪ್ರಾಣಿಯಿಂದ ತೆಗೆದ ಶದ್ಧೀಕೃತ ಔಷಧಿ) ಆ್ಯಂಥ್ರಾಕ್ಸ ರೋಗಿಗೆ ಉಪಯೋಗಿಸಿ ರೋಗದ ತೀವ್ರತೆಯನ್ನು ಕಡಿಮೆಮಾಡಬಹುದು.

## ಗುಹ್ಯರೋಗಗಳು

ಸಿಫಿಲಿಸ್ (Syphilis) :

'ಟ್ರಿಪೋನಿಮಾ ಪ್ಯಾಲಿಡಿಯಂ' ಎಂಬ ರೋಗಜಂತುಗಳಿಂದ ಈ ರೋಗಬರುತ್ತದೆ. ಲೈಂಗಿಕ ಸಂಪರ್ಕದಿಂದ ಈ ರೋಗಗಳು ಹರಡುತ್ತವೆ. ಮುಖ್ಯವಾಗಿ ಶಹರಗಳಲ್ಲಿ ಇವುಗಳ ಪ್ರಾಬಲ್ಯ ಹೆಚ್ಚು. ಇವುಗಳಿಂದ ಸಮಾಜದ ಮೇಲೆ ಆಗುವ ದುಷ್ಪರಿಣಾಮಗಳು ಬಹಳ. ಎಷ್ಟೋ ಸಂಸಾರಗಳು ತಮ್ಮ ಸಂಗಾತಿಗಳ ತಪ್ಪುಗಳಿಂದ ಒಡೆದಿವೆ. ಕೆಲವೊಮ್ಮೆ ಮಕ್ಕಳಾಗದಿರುವದಕ್ಕೆ, ಹೊಟ್ಟೆ ಹೋಗುವದಕ್ಕೆ ಈ ರೋಗಗಳು ಕಾರಣಗಳಾಗಿರಬಹುದು. ಕೂಡಲೇ ಉಪಚರಿಸದಿದ್ದರೆ ರೋಗದಿಂದ ಬಳಲುವ ವಕ್ತಿ ದೃಷ್ಟಿ ಕಳೆದುಕೊಳ್ಳಬಹುದು. ಮಾನಸಿಕ ಸ್ವಾಸ್ಥ್ಯ ಕಳೆದುಕೊಳ್ಳಬಹುದು. ಇಲ್ಲವೇ ಹೃದ್ರೋಗಕ್ಕೆ ಬಲಿಯಾಗಬಹುದು. ಕಾರ್ಮಿಕರಲ್ಲಿ ಮತ್ತು ಹರೆಯುವವರಲ್ಲಿ ಈ ರೋಗಗಳು ಹೆಚ್ಚು ಸಂಖ್ಯೆಯಲ್ಲಿ ಕಾಣಿಸಿಕೊಳ್ಳುತ್ತವೆ. ಸೂಳೆಯರು ಮತ್ತು ರೋಗದಿಂದ ಬಳಲುವವರು ರೋಗ ಹರಡಿಸಲು ಮುಖ್ಯ ಕಾರಣರು.

ರೋಗದ ಲಕ್ಷಣಗಳು : ಸಂಭೋಗ ಮಾಡಿದ ೧೦ ರಿಂದ ೨೦ ದಿನಗಳಲ್ಲಿ ಜನನೇಂದ್ರಿಯದ ಮೇಲೆ ನೋವಿಲ್ಲದ ಹುಣ್ಣು ಕಾಣಿಸಿಕೊಳ್ಳುತ್ತದೆ. ತೊಡೆಯ ಸಂದಿನ ಗಡ್ಡೆಗಳು ದೊಡ್ಡವಾಗುತ್ತವೆ. ಹೀಗೆಯೇ ಬಿಟ್ಟರೆ ಹೃದಯ ಮೆದುಳುಗಳಿಗೆ ರೋಗ ಅಂಟಿಕೊಳ್ಳುತ್ತದೆ.

### ಗೊನೋರಿಯಾ (Gonorrhea)

'ನೈಜಿರಿಯಾ ಗೋನೊಕಾಕೈ'ನಿಂದ ಈ ರೋಗ ಬರುತ್ತದೆ.

ಲೈಂಗಿಕ ಸಂಪರ್ಕದಿಂದ ಬರುವ ಈ ರೋಗ ತಿಂಗಳುಗಳಿಂದ ವರುಷಗಳವರೆಗೆ ಒಬ್ಬರಿಗೆ ಹರಡುತ್ತದೆ.

ರೋಗದ ಲಕ್ಷಣಗಳು : ಮೂತ್ರ ಉರಿಯುವದು ಮತ್ತು ಜನನೇಂದ್ರಿಯದಿಂದ ಬಿಳಿಯ ದ್ರವ ಹೊರಡುವದು. ರೋಗವನ್ನು ಉಪಚರಿಸದೇ ಬಿಟ್ಟರೆ ಮೂತ್ರದ ಧಾರೆ ಸಣ್ಣದಾಗಬಹುದು. ಸಂದುನೋವು, ಎದೆನೋವು ಬರಬಹುದು.

## ಮೃದು ಲೈಂಗಿಕ ಹುಣ್ಣು (Chancroid)

### ರೋಗದ ಕಾರಣ, ಹರಡುವವಿಧಾನ ಮತ್ತು ಲಕ್ಷಣಗಳು

ಲೈಂಗಿಕ ಕ್ರಿಯೆಯಿಂದ ಹರಡುವ ಈ ರೋಗ ಹೀಮೋಫಿಲಸ್ (Haemoplilus) (Ducreeyi) ಡುಕ್ರಿ ಎಂಬ ರೋಗಜಂತುರೋಗಳಿಂದ ಬರುತ್ತದೆ. ಸಂಭೋಗದ ೨–೧೦ ದಿನಗಳಲ್ಲಿ ಈ ರೋಗ ಕಾಣಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ಹಲವಾರು ನೋವುಳ್ಳ, ಅಂಚುಭಿನ್ನವಿಚಿಭಿನ್ನವಾದ, ತಳದ ಮೇಲೆ ಹೊಲಸು ಕೀವುನಿಂತ ಸುಲಭವಾಗಿ ರಕ್ತ ಸ್ರಾವವಾಗುವ ಹುಣ್ಣುಗಳು. ಇವರ ಜೊತೆಗೆ ಸಿಫಿಲಿಸ್ ಇರಬಹುದು.

ರೋಗ ಕಂಡುಹಿಡಿಯುವ ಪ್ರಾಯೋಗಿಕ ವಿಧಾನಗಳು : ಹುಣ್ಣಿನ ತಳದಲ್ಲಿಯ ಭಾಗವನ್ನಾಗಲೀ, ನೀರಿನತಂಪ ಪದಾರ್ಥವನ್ನಾಗಲೀ ಪರೀಕ್ಷಿಸುವದರಿಂದ ಮತ್ತು ಚರ್ಮದಲ್ಲಿ ಪರಿಷ್ಕೃತ ರೋಗಜಂತುಗಳನ್ನು ಚುಚ್ಚಿ ಪರೀಕ್ಷಿಸುವದರಿಂದ ರೋಗವನ್ನು ಕಂಡು ಹಿಡಿಯಬಹುದು.

**ಲಿಂಫೋಗ್ರ್ಯಾನುಲೋಮಾ ಇಂಗ್ವಿನೇಲ್ : Lympho-granuloma inguinale)**

'ಸಿಟ್ಯಾಕೋಸಿಸ್ ಟ್ರಾಕೋಮಾ' (Psyihacosis tachorne) ಜಾತಿಗೆ ಸೇರಿದ ವೈರಸ್‌ನಿಂದ ಬರುವ ಈ ರೋಗ ಸಂಭೋಗ ದಿಂದ ಹರಡುತ್ತದೆ. ಕಾಣಿಸಿಕೊಳ್ಳುವ ಅವಧಿ ೫–೨೧ ದಿನಗಳು

ರೋಗದ ಲಕ್ಷಣಗಳು : ಸಂಭೋಗದ ನಂತರ, ಜನನೇಂದ್ರಿಯದ ಮೇಲೆ ಸಣ್ಣ ಹುಣ್ಣು ಕಾಣಿಸಿಕೊಳ್ಳುವದು. ಇದು ವಾಸಿಯಾದ ನಂತರ ತೊಡೆಯ ಸಂದಿನಲ್ಲಿ ಗಡ್ಡೆಗಳು ಕಾಣಿಸಿಕೊಳ್ಳುತ್ತವೆ. ಜನನೇಂದ್ರಿಯ ಬಾಯಬಹುದು. ಗುದದ್ವಾರದ ಬಳಿ ಹುಣ್ಣು ಬೆಳೆದು ಗುದುದ್ವಾರ ಸಣ್ಣದಾಗಬಹುದು. ಮೂತ್ರ ದ್ವಾರ ಸಣ್ಣದಾಗಬಹುದು.

ರೋಗ ಕಂಡುಹಿಡಿಯುವ ವಿಧಾನ : ಫ್ರೀಸ್ ಪರೀಕ್ಷೆಯಿಂದ (Frei's test) ಇಲ್ಲವೇ ಕಾಂಪ್ಲಿಮೆಂಟ್ ಫಿಕ್ಸೆಶನ್ ಪರೀಕ್ಷೆಯಿಂದ (Compounel-fraction test).

ಪ್ರತಿಬಂಧಕ ಉಪಾಯಗಳು : (೧) ವೈದ್ಯಕೀಯ ವಿಧಾನಗಳು ರೋಗಿಯನ್ನು ಪತ್ತೆ ಹಚ್ಚುವದು. ಮೂಲವನ್ನು ಕಂಡು ಹಿಡಿಯುವದು. ರೋಗಿಗಳ ಯೋಗ್ಯ ಉಪಚಾರ ವೈದ್ಯಕೀಯ ಶಿಕ್ಷಣದಲ್ಲಿ ಗುಹ್ಯರೋಗಗಳ ಬಗ್ಗೆ ಸರಿಯಾದ ಸ್ಥಾನ ನೀಡುವದು.

(೨) ಪ್ರತಿಬಂಧಕ ವಿಧಾನಗಳು ಗುಹ್ಯ ರೋಗಗಳ ಬಗ್ಗೆ ಹಿರಿಯ ಮಕ್ಕಳಿಗೆ ಮತ್ತು ಜನತೆಗೆ ಶಿಕ್ಷಣ ಕೊಡುವದು.

(३) ಜನತೆಯ ಸಾಮಾಜಿಕ ಹಾಗೂ ಆರ್ಥಿಕ ಮಟ್ಟ ವನ್ನು ಎತ್ತರಿಸುವದು.

(೪) ಕಾಯ್ದೆ ಕ್ರಮಗಳು ಸೂಳೆಗಾರಿಕೆ ಪ್ರತಿಬಂಧಿಸುವದು.

## ಕಣ್ಣು ಬೇನೆ ರೋಗ

ಬೆಕ್ಟೀರಿಯಾ ಇಲ್ಲವೇ ವೈರಸ್‌ನಿಂದ ಬರುವ ಈ ರೋಗ. ರೋಗಿಯ ಕಣ್ಣಿನ ಹೊಲಸು ಬೇರೆಯವರ ಕಣ್ಣು ಸೇರುವ ದರಿಂದ ಹರಡುತ್ತದೆ.

ರೋಗದ ಲಕ್ಷಣಗಳು : ಕಣ್ಣು ಕೆಂಪಾಗುವದು, ಮೆತ್ತು ಹಾಕುವದು, ಬಿಸಿಲಿನಲ್ಲಿ ಕಣ್ಣುಗಳಲ್ಲಿ ವಿಪರೀತ ನೀರು ಬರುವದು ಇತ್ಯಾದಿ.

ಪ್ರತಿಬಂಧಕ ಉಪಾಯಗಳು : (೧) ರೋಗಿಯು ಸರಿಯಾದ ಉಪಚಾರ (೨) ರೋಗಿಯ ವಸ್ತುಗಳನ್ನು ಮತ್ತು ವಸ್ತ್ರಗಳನ್ನು ಬೇರೆಯವರು ಉಪಯೋಗಿಸಬಾರದು.

## ಹುರುಕು ಕಜ್ಜಿ

ಸಾರ್ಕೋಪ್ಟಿಸ್ ಸ್ಕೇಬಿ (Sarcoptes scabi) ಎಂಬ ರೋಗ ಜಂತು ಈ ರೋಗಕ್ಕೆ ಕಾರಣ.

ರೋಗದ ಲಕ್ಷಣಗಳು : ವಿಪರೀತ ಮೈ ತುರಿ, ಸಂದು ಗಳಲ್ಲಿ ಹಾಗೂ ಮೈ ಮೇಲೆಲ್ಲ ಗುಳ್ಳೆಗಳು ಕಾಣಿಸಿಕೊಂಡು ಅವು ಕೀವು ತುಂಬುವದು ಇತ್ಯಾದಿ.

ಪ್ರತಿಬಂಧಕ ಉಪಾಯಗಳು: ರೋಗಿಯ ಯೋಗ್ಯ ಉಪಚಾರ ರೋಗಿಯ ವಸ್ತ್ರ, ಹಾಸಿಗೆಗಳನ್ನು ಬೇರೆಯವರು ಉಪಯೋಗಿಸದಿರುವದು. ಉಗುರುಗಳನ್ನು ಮೇಲಿಂದ ಮೇಲೆ ತೆಗೆಯಿಸಿಕೊಳ್ಳುವದು. ರೋಗಿಯನ್ನು ಉಪಚರಿಸುವವರು, ಮುಟ್ಟುವವರು ಕೈಗಳಿಗೆ ಸಾಬೂನು ಹಚ್ಚಿ ಚನ್ನಾಗಿ ತೊಳೆದು ಕೊಳ್ಳಬೇಕ . ರೋಗಿಗೆ ಪೂರ್ಣ ಗುಣವಾಗುವವರೆಗೆ ಕಳುಹಿಸ ಬಾರದು ಇಲ್ಲವೇ ಬೇರೆಯವರೊಡನೆ ಬೆರೆಯಲು ಬಿಡಬಾರದು.

# ೬. ಕ್ರಿಮಿ ಕೀಟಗಳಿಂದ ಹರಡುವ ರೋಗಗಳು

## ಮಲೇರಿಯಾ (ಚಳಿಜ್ವರ)

'ಪ್ಲಾಸ್ಮೋಡಿಯಂ' ಎಂಬ ಪರೋಪಜೀವಿಯಿಂದ ಮಲೇರಿಯಾ ಬರುತ್ತದೆ. ಅನಾಫೆಲಿನ್ ಜಾತಿಗೆ ಸೇರಿದ ಗುಂಗಾಡು ಈ ರೋಗವನ್ನು ಒಬ್ಬರಿಂದ ಒಬ್ಬರಿಗೆ ಹರಡುತ್ತದೆ. ರೋಗಿಯು ಗುಂಗಾಡುವಿನಿಂದ ಕಚ್ಚಿಸಿಕೊಂಡ ಮೇಲೆ ಶರೀರದಲ್ಲಿ ರೋಗಜಂತುಗಳು ಬೆಳೆಯಲು ಪ್ರಾರಂಭಿಸುತ್ತವೆ. ಮತ್ತು ವೃದ್ಧಿಗೊಳ್ಳುತ್ತವೆ.ಇಂಥ ರೋಗಿಯ ರಕ್ತಹೀರಿದ ಗುಂಗಾಡುವಿನ ಶರೀರದಲ್ಲಿ ರೋಗಜಂತುಗಳು, ಮತ್ತಷ್ಟು ಬೆಳೆದು ವೃದ್ಧಿ ಗೊಳ್ಳುತ್ತವೆ. ಆಗ ಗುಂಗಾಡು ಕಚ್ಚಿ ರೋಗ ಹರಡಿಸಲು ಪ್ರಾರಂಭಿಸುತ್ತದೆ.

ರೋಗ ಲಕ್ಷಣಗಳು ; ಚಳಿ, ಜ್ವರ ಮೇಲಿಂದ ಮೇಲೆ ಕಾಣಿಸಿಕೊಳ್ಳುವದು. ರಕ್ತಹೀನತೆ, ಸ್ಪ್ಲಿನ್ ಗ್ರಂಥಿ ದೊಡ್ಡದಾಗುವದು. ಇತ್ಯಾದಿ ಈ ರೋಗದಿಂದ ಮರಣ ಕಡಿಮೆಯಾದರೂ, ಇದರಿಂದ ಸಾಮಾಜಿಕ ರಾಜಕೀಯ,ಆರ್ಥಿಕ, ಔದ್ಯೋಗಿಕ, ಬೇಸಾಯ ಮತ್ತು ಬೌದ್ಧಿಕ ಕ್ಷೇತ್ರಗಳ ಮೇಲೆ ಆಗುವ ದುಷ್ಪರಿಣಾಮಗಳು ಬಹಳ ಯಾಕೆಂದರೆ ಈ ರೋಗಕ್ಕೆ ಬಲಿಯಾದ ಜನಾಂಗದ ಮತ್ತೆ ರಾಷ್ಟ್ರದ ದೈಹಿಕ ಮತ್ತು ಬೌಧ್ಧಿಕ ಬೆಳವಣಿಗೆ ಕುಂದುವದರಿಂದ ಸುಧಾರಣೆಯ ಪ್ರಯತ್ನಗಳೆಲ್ಲ ನಿಷ್ಪ್ರಯೋಜಕವಾಗಬಹುದು. ರೋಗ ನಿರೋಧಕ ಶಕ್ತಿಯನ್ನೇ ಕಳೆದುಕೊಂಡ ವ್ಯಕ್ತಿ ಸುಲಭವಾಗಿ ಬೇರೆ ರೋಗಗಳಿಗೆ ಬಲಿಯಾಗುತ್ತಾನೆ.

ಪ್ರತಿಬಂಧಕ ಉಪಾಯಗಳು :

**(i) ರೋಗವನ್ನು ಹರಡುವ ಅನಾಫೆಲಿಸ್ ಗುಂಗಾಡುಗಳ ಜಾತಿಯನ್ನು ನಾಶಮಾಡುವದು**

**i.** ಡಿ. ಡಿ. ಟಿ., ಬಿ. ಎಚ್. ಸಿ. ಗಳ ಸಿಂಪರಣೆ

**ii.** ಗುಂಗಾಡುಗಳ ಮರಿಗಳನ್ನು ತಿನ್ನುವ ಮೀನುಗಳನ್ನು ಸಾಕುವದು. (ಗ್ಯಾಂಬುಸಿಯಾ ಅಫಿನಿಸ್)

**iii.** ಅಲ್ಲಲ್ಲಿ ನೀರು ನಿಲ್ಲುವ ಗುಂಡಿ, ಹಾಗೂ ತಿಪ್ಪೆಗಳನ್ನು ಮುಚ್ಚುವದು.

**iv.** ಕೊಳಚೆ ನೀರು ಹೋಗುವ ಕಾಲುವೆಗಳಿಗೆ ಆಗಾಗ ಕ್ರಿಮಿನಾಶಕಗಳಿಂದ ಸಿಂಪರಣೆ ಮಾಡುವದು.

**ii ಗುಂಗಾಡುಗಳ ಕಚ್ಚುವಿಕೆಯಿಂದ ಮನುಷ್ಯರ ರಕ್ಷಣೆ**

i. ಸೊಳ್ಳೆ ಪರದೆ ಉಪಯೋಗ.

ii. ಸೊಳ್ಳೆಗಳನ್ನು ಓಡಿಸುವ ಮುಲಾಮಿನ ಲೇಪನ ಅಥವಾ ಧೂಪದ ಉಪಯೋಗ.

**iii. ರೋಗಿಗಳ ಪೂರ್ಣ ಉಪಚಾರ**

ಒಮ್ಮೆ ಕಡಿಮೆಯಾಗಿದ್ದ ಚಳಿಜ್ವರ ಬಾಧೆ ಈಗ ಮತ್ತೆ ಭೀಕರ ಸ್ವರೂಪದಲ್ಲಿ ಕಾಣಿಸಿಕೊಂಡಿದೆ. ಇದಕ್ಕೆ ಕಾರಣಗಳು ಹಲವು ಚಳಿಜ್ವರದ ಕಾರ್ಯಕರ್ತರಿಂದ ರೋಗಿಗಳನ್ನು ಪತ್ತೆ ಹಚ್ಚಿ ಉಪಚರಿಸುವಲ್ಲಿ ವಿಫಲತೆ, ನೆರೆಯ ದೇಶಗಳಿಂದ ರೋಗ ಹರಡುವ ಸಂಭವ ಯಾವಾಗಲೂ ಇದ್ದೇ ಇರುತ್ತದೆ.

## ಪ್ಲೇಗ

ಯೆರ್ಸಿನಿಯಾ ಪೆಸ್ಟಿಸ್ ಎಂಬ ರೋಗ ಜಂತುವಿನಿಂದ ಈ ರೋಗ (yeasiniapestis) ಬರುತ್ತದೆ. ಮೊದಲು ಇಲಿಗಳಲ್ಲಿ ಕಾಣಿಸಿಕೊಳ್ಳುವ ಈ ರೋಗ ಚಿಕ್ಕಾಡುಗಳ ಮಾನವ ಶರೀರವನ್ನು ಸೇರಿ ಅವನಿಗೆ ಬರುತ್ತದೆ.

ರೋಗದ ಲಕ್ಷಣಗಳು : (೧) ಅಲ್ಲಲ್ಲಿ ಗಡ್ಡೆಗಳು ಕಾಣಿಸಿಕೊಳ್ಳುವದು. (೨) ರೋಗಜಂತುಗಳ ವಿಷಾರಿ ಪದಾರ್ಥಗಳಿಂದ ಉಂಟಾಗುವ ಪರಿಣಾಮಗಳು. (೩) ನ್ಯೂಮೋನಿಯಾ.

ಅತೀಜ್ವರ, ಹೃದಯದ ಬಡಿತ ಹೆಚ್ಚುವದು. ಅಲ್ಲಲ್ಲಿ ರಕ್ತ ಸ್ರಾವವಾಗುವದು, ಎಚ್ಚರ ತಪ್ಪುವದು ಇತ್ಯಾದಿ. ನ್ಯೂಮೋನಿಯಾ ಬಗೆಯ ರೋಗ ಭೀಕರವಾದುದು. ಮರಣದ ಸಂಖ್ಯೆ ಹೆಚ್ಚು.

ಪ್ರತಿಬಂಧಕ ಉಪಾಯುಗಳು: (೧) ಇಲಿಗಳ ಸಂಖ್ಯೆ ಕಡಿಮೆಮಾಡುವದು. ವಿಷ ಔಷಧಿಗಳಿಂದ ಇಲ್ಲಿಗಳನ್ನು ಕೊಲ್ಲುವದು. ಬಲೆಗಳಿಂದ ಇಲ್ಲಿಗಳನ್ನು ಹಿಡಿದು ಅವುಗಳನ್ನು ನಾಶ ಪಡಿಸುವದು. ಇಲಿಗಳ ಬಿಲಗಳಲ್ಲಿ ವಿಷಾರಿ ವಾಯುುವನ್ನು ಬಿಡುವದು ಇತ್ಯಾದಿ.

(೨) ಜನರ ಮತ್ತು ಇಲಿಗಳ ಸಂಪರ್ಕ ಕಡಿಮೆಯಾಗುವಂತೆ ಇಲಿಗಳು ಸುಲಭವಾಗಿ ಬಿಲಮಾಡದಂತಹ ಮನೆಗಳ ರಚನೆ

(೩) ರೋಗಕ್ಕೆ ಬಲಿಯಾದ ಇಲಿ, ಚಿಕ್ಕಾಡುಗಳನ್ನು ನಾಶಪಡಿಸುವದು.

(೪) ಪ್ಲೇಗ ನಿರೋಧಕ ಚುಚ್ಚುಮದ್ದು ಹಾಕಿಸಿಕೊಳ್ಳುವದು. ಮತ್ತು ರೋಗಕ್ಕೆ ಬಲಿಯಾಗಬಹುದಾದವರನ್ನು ಔಷಧಿಗಳಿಂದ ರಕ್ಷಿಸುವದು.

(೫) ರೋಗದ ಸಮಾಚಾರವನ್ನು ಕೊಡಲೇ ಸಂಬಂಧಪಟ್ಟ ಅಧಿಕಾರಿಗಳಿಗೆ ತಿಳಿಸುವದು.

## ಕ್ಯಾಸನೂರ ಅರಣ್ಯ ರೋಗ

ಶಿವಮೊಗ್ಗೆ ಜಿಲ್ಲೆಯ ಸಾಗರ ತಾಲೂಕಿನ ಹಳ್ಳಿಗಳಲ್ಲಿ ಮೊದಲು ಮಂಗಗಳಲ್ಲಿ ಕಾಣಿಸಿಕೊಂಡು, ಆನಂತರ ಮನಷ್ಯರಿಗೆ ಹಬ್ಬುವ ಈ ರೋಗ ವೈರಸ್‌ನಿಂದ ಬರುತ್ತದೆ. ಮಂಗಗಳಿಂದ, ತಗಣಿ ಜಾತಿಗೆ ಸೇರಿದ ಹುಳು ಈ ರೋಗವನ್ನು ಮನುಷ್ಯರಿಗೆ ಹರಡುತ್ತದೆ.

ರೋಗದ ಲಕ್ಷಣಗಳು: ಜ್ವರ, ತಲೆನೊವು, ಬೆನ್ನು, ಕಾಲು ನೋವು, ಅತಿಯಾದ ಅಶಕ್ತಿ,ಕಣ್ಣು ಕೆಂಪಾಗುವದು. ವಾಂತಿ ಬೇಧಿ ಮತ್ತು ಮೂಗು, ಹಲ್ಲುಗಳ ಒಸಡೆ, ಜಠರಗಳಿಂದ ರಕ್ತ ಸ್ರಾವ.

ರೊಗ ಪ್ರತಿಬಂಧಕ ಉಪಾಯುಗಳು: ಪ್ರಾಣಿಗಳು, ರೋಗಗಳಿಂದ ಬಳಲುವ ಮಂಗಗಳಿದ್ದ ಅಡವಿಗಳಿಗೆ ಹೋಗ ದಂತೆ ಮುಂಜಾಗರೂಕತಾ ಕ್ರಮಗಳನ್ನು ತೆಗೆದುಕೊಂಡರೆ ರೋಗ ಹರಡುವದು ನಿಲ್ಲುತ್ತದೆ. ಅರಣ್ಯಗಳಲ್ಲಿ ಹಾಯ್ದು ಹೋಗುವವರು ಈ ತಗಣಿ ಜಾತಿಯ ಹುಳುಗಳು ಮೈಗೆ ಅಂಟಿ ಕೊಳ್ಳದಂತೆ ಜಾಗ್ರತೆ ವಹಿಸಬೇಕು.

### ಆನೆ ಕಾಲು ರೋಗ (ಫೆಲೇರಿಯ Filaria)

ರೋಗ ಹರಡುವ ರೀತಿ: ಭಾರತದ ಸಮುದ್ರ ತೀರದ ಪಟ್ಟಣ ಗಳಲ್ಲಿ ಹೆಚ್ಚಾಗಿ ಕಂಡುಬರುವ ಈ ರೋಗ ವುಚರೆಕೀಯಾ ಬ್ಯಾಂಕ್ರಾಪ್ಟಿ (wuchereria bancrofti) ಮತ್ತು ಬ್ರುಗಿಯೋ ಮಲಾಯಿ (Brugiomalayi) ಎಂಬ ಹುಳುಗಳಿಂದ ಬರುತ್ತದೆ. ಈ ಹುಳುಗಳು. ಮನುಷ್ಯನ ರಕ್ತನಾಳ ಲಿಂಫ್ಯಾಟಿಕ್ಸ್, ಎದೆ ಮತ್ತು ಹೊಟ್ಟೆಯ ಭಾಗಗಳಲ್ಲಿ ಇರುತ್ತವೆ. ಹೆಣ್ಣುಹುಳು ೩" ಉದ್ದವಿರುತ್ತದೆ. ಗಂಡು ೨" ಉದ್ದವಿರುತ್ತದೆ. ಇವೆರಡರ ಸಂಯೋಗದಿಂದ ಮರಿಗಳು ಹುಟ್ಟುತ್ತವೆ. ಈ ಮರಿಗಳಿಗೆ ಮೇಲೆ ಕವಚವಿರುತ್ತದೆ. ರಾತ್ರಿ ಹೊತ್ತು ಮರಿಗಳು ರಕ್ತದಲ್ಲಿ ಕಾಣಿಸಿಕೊಳ್ಳುತ್ತವೆ. ಗುಂಗಾಡು ಮನುಷ್ಯನನ್ನು ಕಚ್ಚಿ ಅವನ ರಕ್ತ ಹೀರಿದಾಗ ಮರಿಗಳು ಗುಂಗಾಡುವಿನ ಶರೀರ ಸೇರಿ, ಮೇಲಿನ

ಕವಚ ಕಳಚಿ ಬೆಳೆಯು ತೊಡಗುತ್ತವೆ. ಈ ಬೆಳವಣಿಗೆ ಪೂರ್ಣವಾದಾಗ, ಗುಂಗಾಡುವಿನ ಕಚ್ಚುವಿಕೆಯಿಂದ ರೋಗ ಬೇರೆಯವರಿಗೆ ಹರಡುತ್ತದೆ.

ರೋಗದ ಲಕ್ಷಣಗಳು : ಜ್ವರ, ಮತ್ತು ಲಿಂಫ್‌ನಾಳಗಳ ಊತ, ವೈನವೆ, ತಲೆನೋವು, ಕಾಲು ಊದುವದು, ಜನನೇಂದ್ರಿಯ ಊದಿಕೊಳ್ಳುವದು ಹೊಟ್ಟೆ ಊತ, ಮೊಲೆ ಊತ, ಮೂತ್ರದಲ್ಲಿ ಬಿಳಿರಸದಂಥ ಪಧಾರ್ಥ ಬರುವದು (Chyluria) ಇತ್ಯಾದಿ.

ಕಂಡು ಹಿಡಿಯುವ ಪ್ರಾಯೋಗಿಕ ವಿಧಾನಗಳು:

ರಾತ್ರಿ, ರೋಗಿ ಮಲಗಿದಾಗ ಅವನ ರಕ್ತ ಪರೀಕ್ಷೆ ಮಾಡುವದರಿಂದ ಗುಂಗಾಡುಗಳು ಬೆಳೆಯಲು ವಿಪುಲ ಅವಕಾಶ, (ನಿಂತ ನೀರಿನ ಗುಂಡಿಗಳು) ವಿಪರೀತ ಜನದಟ್ಟಣೆ ಇರುವ ಪಟ್ಟಣಗಳು, ಇವು ರೋಗದ ಬೆಳವಣಿಗೆಯ ಮುಖ್ಯಕಾರಣಗಳು.

ಪ್ರತಿಬಂಧಕ ಉಪಾಯಗಳು : ೧. ರೋಗಿಯನ್ನು ಬೇರ್ಪಡಿಸಿ ಉಪಚರಿಸುವದು. ೨. ಹೊಲಸು ನೀರನ್ನು ಸರಿಯಾದ ಕಾಲುವೆಗಳ ಮೂಲಕ ನಿಲ್ಲದಂತೆ ನೋಡಿಕೊಳ್ಳುವದು. ೩. ಮನೆ ಹಾಗೂ ಕಾಲುವೆಗಳಿಗೆ ಡಿ. ಡಿ. ಟಿ.ಇಲ್ಲವೆ ಬಿ. ಎಚ್. ಸಿ ಸಿಂಪರಣೆ ೪. ರೋಗ ಪ್ರಾಬಲ್ಯವಿರುವ ಪ್ರದೇಶಗಳಲ್ಲಿ ಮಚ್ಚರದಾನಿ ಮತ್ತು ಸೊಳ್ಳೆಗಳನ್ನು ಓಡಿಸುವ ಹೊಗೆಯ ತಂತಿ ಇತ್ಯಾದಿಗಳ ಉಪಯೋಗ.

**ಕಾಲಾಅಝಾರ (ಡಂ. ಡಂ. ಜ್ವರ) (Kala Azar)**

ಲಕ್ಷಣಗಳು : ಜ್ವರ ಕಾಣಿಸಿಕೊಂಡವರಲ್ಲಿ ಸ್ಪ್ಲೀನ್ ಮತ್ತು ಕೆಲವೊಮ್ಮೆ ಯಕೃತ್ ದೊಡ್ಡದಾಗುವದು, ನಿಶ್ಯಕ್ತಿ,

ಕ್ಷೀಣಿಸುವದು, ರಕ್ತಹೀನತೆ, ಶ್ವೇತ ಗೋಲಕಗಳ ಕೊರತೆ, ತ್ವಚೆಯು ಕಪ್ಪು ಬಣ್ಣ ಹೆಚ್ಚುವದು ಇತ್ಯಾದಿ.

ರೋಗ ಜಂತು: ಲೀಶ್‌ಮೋನಿಯಾ ಡೋನೋವಾನಿ (Leishmania Donovani) ಎಂಬ ಸೂಕ್ಷ್ಮ ರೋಗಾಣು ವಿನಿಂದ ಈ ರೋಗಬರುತ್ತದೆ. ಭಾರತದಲ್ಲಿ ಫ್ಲಿಬೋಟೋಮಸ್ ಆರ್ಜೆಂಟಿಪಿಸ್(Phlebotomus Argentipes)ಎಂಬ ನೊಣ ಗಳ ಕಚ್ಚುವಿಕೆಯಿಂದ ಈ ರೋಗ ಹರಡುತ್ತದೆ.

ಭೌಗೋಲಿಕ ಹರಡುವಿಕೆ: ಬಿಹಾರ, ಆಸ್ಸಾಮ, ಪಶ್ಚಿಮ ಬಂಗಾಲ, ಉತ್ತರ ಪ್ರದೇಶದ ಪೂರ್ವಭಾಗಗಳು.

ಅವಧಿ: ನೊಣ ಕಚ್ಚಿದಾಗಿನಿಂದ ರೋಗ ಕಾಣಿಸಿಕೊಳ್ಳಲು ಸಾಮಾನ್ಯವಾಗಿ ೩ ರಿಂದ ೬ ತಿಂಗಳು ಸಮಯಬೇಕು.

ರೋಗ ಕಂಡು ಹಿಡಿಯುವ ವಿಧಾನ: ರಕ್ತದ ಪರೀಕ್ಷೆ ಯಿಂದ ಚೋಪ್ರಾ ಪರೀಕ್ಷೆ (Chopra test) ಇಲ್ಲವೆ ನೇಪಿಯರ್ಸ ಪರೀಕ್ಷೆ (Napier's test).

ಪ್ರತಿಬಂಧಕ ಉಪಾಯಗಳು: ೧. ರೋಗಿಯನ್ನು ಪ್ರತ್ಯೇಕಿಸಿ ಉಪಚರಿಸುವದು. ೨. ನೊಣಗಳ ನಿರ್ಮೂಲನೆ ಡಿ. ಡಿ. ಟಿ ಬಿ.ಎಚ್.ಸಿ ಅಥವಾ ಪೈರಿಥಯಾನ್ ಸಿಂಪರಣೆ ಯಿಂದ.

## ದಿಲ್ಲಿ ಹುಣ್ಣು

ಆಶಮೋನಿಯಾ ಟ್ರೋಪಿಕ್ ಎಂಬ ರೋಗಜಂತುವಿನಿಂದ ರೋಗಬರುತ್ತದೆ.

ಲಕ್ಷಣಗಳು: ಮೊದಲು ಮುಖ, ಕಿವಿ ಕೈ ಅಥವಾ ಕಾಲ ಮೇಲೆ ಸಣ್ಣ, ಸಣ್ಣ ಹುಣ್ಣುಗಳು ಕಾಣಿಸಿಕೊಂಡು ಅವು ದೊಡ್ಡ ವಾಗುತ್ತ ಹೋಗುತ್ತವೆ. ಅವುಗಳ ಮೇಲಿನ ಪರೆ ತೆಗೆದಾಗ ಹುಣ್ಣುಗಳು ಕಾಣಿಸಿಕೊಳ್ಳುತ್ತವೆ.

ಭೌಗೋಲಿಕ ಹರಡುವಿಕೆ: ಬಿಹಾರ, ಆಸ್ಸಾಮು ಪಶ್ಚಿಮ ಬಂಗಾಲ ಮತ್ತು ಉತ್ತರ ಪ್ರದೇಶದ ಪೂರ್ವಭಾಗಗಳು.

ಅವಧಿ– ನೊಣಕಚ್ಚಿದಾಗಿನಿಂದ ೩ ರಿಂದ ೬ ತಿಂಗಳುಗಳು

ರೋಗ ಕಂಡುಹಿಡಿಯುವ ವಿಧಾನ–ರಕ್ತ ಪರೀಕ್ಷೆಯಿಂದ

ಪ್ರತಿಬಂಧಕ ಉಪಾಯಗಳು: (೧) ರೋಗಿಗಳ ಪ್ರತ್ಯೇಕ ಉಪಚಾರ (೨) ಕ್ರಿಮಿನಾಶಕಗಳಿಂದ ನೊಣಗಳ ನಿರ್ಮೂಲನೆ.

## ೭. ಸಾರಾಂಶ

ಇಷ್ಟೊಂದು ಸಾಂಸರ್ಗಿಕ ರೋಗಗಳ ಬಗ್ಗೆ ಹೇಳಿದ ಮೇಲೆ ಅವುಗಳ ಲಕ್ಷಣಗಳನ್ನು ನೆನಪಿನಲ್ಲಿಟ್ಟುಕೊಳ್ಳುವದು ಸಾಧ್ಯವೂ ಅಲ್ಲ ಸಾಧುವೂ ಅಲ್ಲ. ರೋಗ ಸಾಂಸರ್ಗಿಕವಾಗಲಿ, ಇಲ್ಲದಿರಲಿ ಕೆಲವೊಂದು ಸಾರ್ವಜನಿಕ ನಿಯಮಗಳನ್ನು ಎಲ್ಲರೂ ಕಟ್ಟುನಿಟ್ಟಾಗಿ ಪಾಲಿಸಬೇಕು.

೧. ರೋಗಿಯನ್ನು ಗಾಳಿ, ಬೆಳಕುಗಳಿಂದ ಕೂಡಿದ ಸ್ವಚ್ಛ ವಾದ ಕೋಣೆಯಲ್ಲಿಟ್ಟು ಉಪಚರಿಸಬೇಕು.

೨. ಆ ಕೋಣೆಯಲ್ಲಿ ಗುಂಗಾಡು, ಚಿಕ್ಕಾಡು, ತಗಣಿಗಳಿರ ದಂತೆ ಕ್ರಿಮಿನಾಶಕಗಳನ್ನು ಆಗಾಗ ಸಿಂಪಡಿಸುತ್ತಿರಬೇಕು.

೩. ಯಾರೂ ಸಿಕ್ಕ ಸಿಕ್ಕಲ್ಲಿ ಉಗುಳಬಾರದು.

೪. ಸಾರ್ವಜನಿಕ ಸ್ಥಳಗಳಲ್ಲಿ ವಾಸಿಸುವ ಮನೆಗಳ, ಶಾಲೆ ಗಳ ಸುತ್ತು ಮುತ್ತಲೂ ಮಲಮೂತ್ರ ವಿಸರ್ಜನೆ ಮಾಡಬಾರದು. ಸಾಧ್ಯವಾದಲ್ಲೆಲ್ಲ ಸಾರ್ವಜನಿಕ ಮೂತ್ರಿ ಮತ್ತು ಪಾಯಖಾನೆ ಗಳನ್ನು ಕಟ್ಟಿಸಬೇಕು.

೫. ರೋಗಿಯು ಕೆಮ್ಮುವಾಗ ಮುಖಕ್ಕೆ ಬಟ್ಟೆಹಿಡಿದು ಕೊಳ್ಳಬೇಕು. ಅವನನ್ನು ಉಪಚರಿಸುವವರು ಮುಖಕ್ಕೆ ಮುಖ ವಾಡ ಧರಿಸಬೇಕು. ಮಲ, ಮೂತ್ರಗಳನ್ನು ಮುಟ್ಟಿದ ಮೇಲೆ ಸಾಬೂನಿನಿಂದ ಸ್ವಚ್ಛವಾಗಿ ಕೈತೊಳೆದುಕೊಳ್ಳಬೇಕು. ವಾರಕ್ಕೊಮ್ಮೆಯಾದರೂ ಉಗುರು ತೆಗೆದುಕೊಳ್ಳಬೇಕು. ರೋಗಿಯ ಮಲ, ಮೂತ್ರಗಳನ್ನು ಯೋಗ್ಯರೀತಿಯಲ್ಲಿ ನಾಶ ಪಡಿಸಬೇಕು. ಅವನು ಉಪಯೋಗಿಸುವ ಬಟ್ಟೆಗಳನ್ನು ಬೇರೆ ಯವರು ಉಪಯೋಗಿಸಬಾರದು.

೬. ಮಕ್ಕಳಿಗೆ ಸಕಾಲದಲ್ಲಿ ರೋಗ ನಿರೋಧಕ ಚುಚ್ಚು ಮದ್ದನ್ನು ಹಾಕಬೇಕು.

ಹುಟ್ಟಿದ ಮೂರು ತಿಂಗಳುಗಳೊಳಗಾಗಿ ಮೈಲಿ ಮತ್ತು ಬಿ. ಸಿ. ಜಿ ತೆಗೆಯಿಸಬೇಕು

೩, ೪, ೫ ನೆಯ ತಿಂಗಳುಗಳಲ್ಲಿ ತ್ರಿರೋಗ ನಿರೋಧಕ ಚುಚ್ಚುಮದ್ದು (ಗಂಟಲು ಬೇನೆ, ನಾಯಿಕೆಮ್ಮು, ಧನುರ್ವಾಯು) ಹಾಗೂ ಪೋಲಿಯೋ ನಿರೋಧಕ ಔಷಧಿ ಹಾಕಿಸಬೇಕು.

೫ ನೆಯ ವರುಷದಲ್ಲಿ ಗಂಟಲುಬೇನೆ, ಧನುರ್ವಾಯು ಬರದಂತೆ ಚುಚ್ಚುಮದ್ದು ಪೋಲಿಯೊ ನಿರೋಧಕ ಔಷಧಿಯನ್ನು ಮತ್ತೊಮ್ಮೆ ಹಾಕಿಸಬೇಕು.

ಸಾಂಕ್ರಾಮಿಕಕಾಲದಲ್ಲಿ ಉಳಿದ ಜನತೆಯನ್ನು ಕಾಲರಾ, ವಿಷಮಜ್ವರ ಪ್ಲೇಗ್ ಇತ್ಯಾದಿ ರೋಗಗಳ ವಿರುದ್ಧ ಪ್ರತಿಬಂಧಕ ಚುಚ್ಚುಮದ್ದು ಹಾಕಿ ರಕ್ಷಿಸಬೇಕು.

ಗರ್ಭಿಣಿಯರಿಗೆ ೭, ೮, ೯ನೆಯ ತಿಂಗಳುಗಳಲ್ಲಿ ಧನುರ್ವಾಯು ನಿರೋಧಕ ಚುಚ್ಚುಮದ್ದು ಕೊಡಿಸಬೇಕು.

೭. ರೋಗದ ಸರಿಯಾದ ಮಾಹಿತಿಯನ್ನು ಕೊಡಲೇ ಸಂಬಂಧಪಟ್ಟ ಅಧಿಕಾರಿಗಳಿಗೆ ನೀಡಬೇಕು.

೮. ರೋಗಿಯ ಪೂರ್ಣ ಚಿಕಿತ್ಸೆಯಾಗದ ಹೊರತು ಅವನನ್ನು ಸಾರ್ವಜನಿಕ ಸ್ಥಳಗಳಲ್ಲಿ ಬಿಡಬಾರದು.

೯. ಸಾರ್ವಜನಿಕ ಕೆರೆ, ಭಾವಿಗಳ ನೀರು ಉಪಯೋಗಿಸುವವರು, ತಂತಮ್ಮ ಪಾತ್ರೆಗಳನ್ನು ನೀರಲ್ಲಿ ಅದ್ದಲು ಬಿಡದೇ, ಒಂದೇ ಪಾತ್ರೆಯನ್ನು ಮತ್ತು ಹಗ್ಗವನ್ನು ಅಲ್ಲಿ ಶಾಸ್ವತವಾಗಿಡಬೇಕು. ಮತ್ತು ಜನತೆ ಈ ನಿಯಮಗಳನ್ನು ಮುರಿಯದಂತೆ ಯೋಗ್ಯ ಕಾವಲಿಡಬೇಕು.

೧೦. ದಿನನಿತ್ಯವೂ ಎಲ್ಲರೂ ಸ್ನಾನಮಾಡಬೇಕು. ಶುದ್ಧ ಹವೆಯಲ್ಲಿ ತಿರುಗಾಡಬೇಕು. ಇಲ್ಲವೇ ವ್ಯಾಯಾಮ ಮಾಡಬೇಕು.

೧೧. ರಸ್ತೆಯ ಬದಿಯಲ್ಲಿರುವ ತಿನ್ನುವ ಪದಾರ್ಥಗಳ ಮೇಲೆ ನೊಣಗಳು ಕುಳಿತುಕೊಳ್ಳುವದರಿಂದ ಹೊಲಸು ಸೇರಿರುವದರಿಂದ ಅಂಥ ಪಧಾರ್ಥಗಳನ್ನು ಯಾರೂ ಸೇವಿಸಬಾರದು. ಸಾಂಕ್ರಮಿಕ ಕಾಲದಲ್ಲಿ ಆಯಸ್ಕ್ರೀಮು ನಂತಹ ಪದಾರ್ಥಗಳನ್ನು ಯಾರೂ ಮಕ್ಕಳಿಗೆ ಕೊಡಿಸಬಾರದು.

೧೨. ಹಣ್ಣು, ಹಂಪಲು ಕಾಯಿಪಲ್ಲೆಗಳನ್ನು ಬಿಸಿನೀರಿನಲ್ಲಿ ಚನ್ನಾಗಿ ತೊಳೆದು ಉಪಯೋಗಿಸಬೇಕು.

೧೩. ಅಡಿಗೆ ಮನೆಯಲ್ಲಿರುವವರು, ಆಹಾರವಿದ್ದ ಪಾತ್ರೆಗಳನ್ನು ಯಾವಾಗಲೂ ಮುಚ್ಚಿಡಬೇಕು, ಆಹಾರವನ್ನು ಬಡಿಸುವಾಗ ಕೈಯಿಂದ ಮುಟ್ಟಬಾರದು.

೧೪. ಸಾಂಕ್ರಮಿಕ ಕಾಲದಲ್ಲಿ ಎಲ್ಲರೂ ಬಿಸಿ ಆಹಾರವನ್ನು ಊಟ ಮಾಡಬೇಕು ಮತ್ತು ಕಾಯಿಸಿದ ನೀರು ಕುಡಿಯಬೇಕು.

೧೫. ಜಾತ್ರೆ, ಸಂತೆಗಳಲ್ಲಿ ರೋಗ ಪ್ರತಿಬಂಧಕ ಕಾಯ್ದೆಗಳನ್ನು ಕಟ್ಟು ನಿಟ್ಟಾಗಿ ಪಾಲಿಸಬೇಕು.ಸಾಂಕ್ರಮಿಕ ರೋಗಹರಡುವ ಭೀತಿ ಇದ್ದರೆ ತಕ್ಕ ಪ್ರತಿಬಂಧಕ ಚುಚ್ಚುಮದ್ದು ಹಾಕಿಸಬೇಕು. ಶುದ್ಧ ಕುಡಿಯುವ ನೀರು ಎಲ್ಲರಿಗೂ ಸಿಗುವಂತಾಗಬೇಕು.

ಮಲಮೂತ್ರ ವಿಸರ್ಜನೆಗೆ ಸಾಕಷ್ಟು ತಕ್ಕ ಏರ್ಪಾಡುಗಳಾಗಬೇಕು. ತಿನ್ನುವ ಪದಾರ್ಥಗಳ ಮೇಲೆ ವ್ಯಾಪಾರಿಗಳು

ಮುಚ್ಚುವಂತೆ ಮತ್ತು ಅವುಗಳನ್ನು ಕೈಯಿಂದ ಮುಟ್ಟದಂತೆ ಕಟ್ಟುನಿಟ್ಟಿನ ಕ್ರಮಗಳುಬೇಕು.

ಹೀಗೆ ಮಾಡುವದರಿಂದ ವ್ಯಕ್ತಿ ತನ್ನ ಆರೋಗ್ಯವನ್ನು ರಕ್ಷಿಸಿಕೊಳ್ಳುವದಲ್ಲದೆ ಸಮಾಜದ ಸಾಸ್ಥ್ಯವನ್ನೂ ಕಾಪಾಡಿದಂತಾಗುತ್ತದೆ. ಇದು ಪ್ರತಿಯೊಬ್ಬ ವ್ಯಕ್ತಿಯ ಕರ್ತವ್ಯವೂ ಹೌದು.

---

# ಉಪನ್ಯಾಸ ಗ್ರಂಥಮಾಲೆಯ ಇತ್ತೀಚಿನ ಪ್ರಕಟನೆಗಳು

೧ ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳು
—ಸಿ. ಹನುಮೇಗೌಡ

೨ ಹಾವುಗಳು ಮಾನವನ ಮಿತ್ರ–ಶತ್ರು
—ಎನ್. ಟಿ. ಮೋಟೆಬೆನ್ನೂ

೩ ತೋಂಟದ ಸಿದ್ಧಲಿಂಗ ಶಿವಯೋಗಿಗಳು
—ಎ. ಆರ್. ಪಾಟೀಲ

೪ ವೇದಗಳು, ವೇದಾಂಗಗಳು ಮತ್ತು ವೇದಾಂತ ತತ್ತ್ವ
—ಬಿ. ಎನ್. ಕೃಷ್ಣಮೂ

೫ ಶಿರಾಲಿಯಗೊಂಡರು
—ನಾರಾಯಣ ಯಾಜಿ

೬ ಇಂಗ್ಲೀಷ್ ಸಾಹಿತ್ಯದಲ್ಲಿ ಹಾಸ್ಯ ಮತ್ತು ವಿಡಂಬನೆ
—ವ್ಹಿ. ಕೆ. ನವಲಗುಂದ

೭ ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳವರ ಚರಿತ್ರೆ
—ಜಿ. ಕೃಷ್ಣರಾ

೮ ಗ್ರಂಥಾಲಯ ಸೇವೆ
—ಎಸ್. ಎಲ್. ಸಂಗಮ

೯ ಶರಣ ಸಾಹಿತ್ಯ
—ಬಸವಣ್ಣೆಪ್ಪಾ ಸೊ. ಗೊರವರ

೧೦ ಉಪ್ಪು ಮತ್ತು ಅದರ ಸ್ವರೂಪ
—ಬಿ. ಕೆ. ಚಳಗೇರಿ

ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦ ೦೦